# ವ್ಯಾವಹಾರಿಕ ಅಹಿಂಸೆ

ಲೇಖಕರು

**ಕಿಶೋರ್‌ಲಾಲ್ ಮಶ್ರೂವಾಲಾ**



ಅನುವಾದಕರು

**ಸಿದ್ದವನಹಳ್ಳಿ ಕೃಷ್ಣಶರ್ಮ**

# ವ್ಯಾವಹಾರಿಕ ಅಹಿಂಸೆ

ಲೇಖಕರು :

**ಕಿಶೋರ್‌ಲಾಲ್ ಮಶ್ರುವಾಲಾ**



1941

ಅನುವಾದಕರು :

**ಸಿದ್ದವನಹಳ್ಳಿ ಕೃಷ್ಣಶರ್ಮ**

ಗ್ರಾಮಸೇವಾ ನಿಲಯ, ಮೈಸೂರು

ಬೆಲೆ ೮ ಆಣೆ

# ಮುನ್ನುಡಿ

ರಿಚರ್ಡ್ ಗ್ರೆಗ್‌ರವರ "ಅಹಿಂಸಾ ಶಿಕ್ಷಣ" ವೂ ಈ "ವ್ಯಾವಹಾರಿಕ ಅಹಿಂಸೆ" ಯನ್ನು ಕುರಿತ ಪ್ರಬಂಧಗಳೂ ಕಾಕತಾಳೀಯವಾಗಿ ಒಂದೇ ಕಾಲದಲ್ಲಿ ಪ್ರಕಟವಾಗಿವೆ. ಅಹಿಂಸೆಯ ಉಪಾಸಕನು ಇವೆರಡನ್ನೂ ಜೊತೆಯಾಗಿ ಓದಬೇಕು. ಗ್ರೆಗ್‌ರವರಂತೆ ಕಿಶೋರ್‌ಲಾಲ್ ಮಶ್ರುವಾಲಾರವರೂ ಅಹಿಂಸೆಯ ಶ್ರದ್ಧಾಪೂರ್ಣ ಸಂಶೋಧಕರು. ಆ ಪಂಥದಲ್ಲಿಯೇ ಹುಟ್ಟಿ ಬೆಳೆದವರಾದರೂ ಅವರು ಯಾವುದನ್ನೂ ಕಣ್ಣುಮುಚ್ಚಿ ನಂಬುವವರಲ್ಲ. ತಮ್ಮ ಪ್ರಯೋಗ, ಪರೀಕ್ಷೆಯಲ್ಲಿ ನಿಜವೆನಿಸಿದುದನ್ನೇ ನಂಬುವರು. ಹಾಗೆ ಮಥಿಸಿ ಸರಿ ಎಂದು ಅಹಿಂಸೆಯನ್ನು ಒಪ್ಪಿರುವರು. ಸ್ವಂತ ಜೀವನದಲ್ಲಿ, ಆಚರಣೆಯಲ್ಲಿ, ವಿಧವಿಧ ಪರಿಸ್ಥಿತಿಗಳಲ್ಲಿ, ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸಾರಿಕ ಕ್ಷೇತ್ರಗಳಲ್ಲಿ ಅವರು ಅಹಿಂಸೆಯ ಪ್ರಭಾವವನ್ನು ಸ್ಪಷ್ಟಪಡಿಸಿರುವರು. ಅದರಿಂದ ಅವರ ಈ ಪ್ರಬಂಧಗಳಿಗೆ ಒಂದು ವಿಶೇಷ ಬೆಲೆಯುಂಟು. ಈ ಪ್ರಬಂಧಗಳು ಈ ತತ್ವದಲ್ಲಿ ವಿಶ್ವಾಸವುಳ್ಳವರಿಗೆ ಶ್ರದ್ಧೆಯನ್ನೀಯುವುವು; ಪ್ರಾಮಾಣಿಕರ ಸಂದೇಹಗಳನ್ನು ನಿವಾರಿಸುವುವು

ಸೇವಾಗ್ರಾಮ
೩೧ ಆಗಸ್ಟ್ ೧೯೪೧ — **ಮೋ. ಕ. ಗಾಂಧೀ.**

**ಸೂ:**—Non voilence—Anti voilence ಎಂಬ ಇಂಗ್ಲೀಷ್ ಪದಗಳಿಗೆ ಕನ್ನಡದಲ್ಲಿ ಅಹಿಂಸೆ–ಅವಿಹಿಂಸೆ ಎಂಬ ಪದಗಳನ್ನು ಉಪಯೋಗಿಸಲಾಗಿದೆ.

**ಸಿ. ಕೈ.**

## ಜಿಜ್ಞಾಸೆ

### ಹಿಂಸೆಯೆ ಅಹಿಂಸೆಯೆ—ಯಾವುದು?

ಈ ಪ್ರಶ್ನೆ ನಮಗಿಂದು ಬರೀ ಚರ್ಚೆಯಲ್ಲ, ಬಾಳಿನ ಸಮಸ್ಯೆ. ಇಪ್ಪತ್ತನೆಯ ಶತಮಾನದ ಮಹತ್ವದ ವಿಷಯ. ಅಹಿಂಸೆಯೆಂಬ ಈ ಹೊಸ ಶಬ್ದವನ್ನು ನಮಗೆ ನೀಡಿದವರು ಗಾಂಧೀಜೀ. ಅವರ ಸತ್ಯಾಗ್ರಹ ವಿಧಾನದಲ್ಲಿ ಹುದುಗಿದೆ ಆ ಶಬ್ದ. ಎಲ್ಲ ಬಗೆಯ ದೌರ್ಜನ್ಯಕ್ಕೂ ಅವರ ನಿರೋಧವಿಧಾನ ಸತ್ಯಾಗ್ರಹ. ಈ ಅಹಿಂಸೆ-ಸತ್ಯಾಗ್ರಹಗಳ ಭಾವವನ್ನು ನಮಗೆ ತಿಳಿಸಲು ಮೂವತ್ತು ವರ್ಷದಿಂದ ತಮ್ಮ ಬುದ್ಧಿಶಕ್ತಿ ಕ್ರಿಯಾಶಕ್ತಿಗಳೆರಡನ್ನೂ ಉಪಯೋಗಿಸಿದಾರೆ. ಆದರೂ ನಮ್ಮಲ್ಲಿ ಎಷ್ಟೋಜನ 'ಇದು ಬಲು ಸೂಕ್ಷ್ಮ ವಿಚಾರ, ನಮ್ಮ ಬುದ್ಧಿಗೆ ಎಟಕುವುದಿಲ್ಲ' ಎಂತಲೋ 'ನಮಗದನ್ನು ನಡಸಲು ಶಕ್ತಿ ಸಾಲದು' ಎಂತಲೋ ಹೇಳುತ್ತಿದೇವೆ.

ಅದೇ, ಹಿಂಸೆಯ ಬಗ್ಗೆ ನಮಗೆ ಯಾರಿಗೂ ಅನುಮಾನವಿಲ್ಲ. ಹಿಂಸೆ ಎಂದರೇನೋ ಗೊತ್ತಿದೆ. ಹೊಸಹೊಸ ಸಂಪಾದನೆ, ಹಿಂದೆ ಗಳಿಸಿದ್ದರ ರಕ್ಷಣೆ; ಇದಕ್ಕಾಗಿ, ನಮ್ಮ ಸ್ವಾರ್ಥಕ್ಕೆ ಯಾವ ದಾರಿ ಸರಿ ಕಂಡರೆ ಅದೇ ಸರಿ—ಇದೇ ಹಿಂಸೆ. ಒಂದು ಸಲ ಸೂಕ್ಷ್ಮವಾಗಿ ಅವ್ಯಕ್ತವಾಗಿ, ಇನ್ನೊಂದುಸಲ ಭೀಕರವಾಗಿ ಭೀಭತ್ಸವಾಗಿ ನಮ್ಮ ಬಾಳಿನಲ್ಲಿ ದಿನವೂ ಕಾಣುತ್ತಿರುತ್ತದೆ.

ಆದರ ಮೋಡಿಯಿಂದ ಜಗತ್ತಿನ ಪರಿಸ್ಥಿತಿ—ಯೂರೋಪಿನ ಘಟನೆಗಳಿಂದ ಮಾರ್ಪಡುತ್ತಿರುವ ನಮ್ಮ ಪರಿಸ್ಥಿತಿ—ನಮ್ಮ ಬಾಳನ್ನೇ ಒಂದು ಇಕ್ಕಟ್ಟಿಗೆ ತಂದು ನಿಲ್ಲಿಸಿದೆ; ಹಿಂಸೆಯೋ ಅಹಿಂಸೆಯೋ ಎರಡರಲ್ಲೊಂದನ್ನು ನಾವಿಂದು ಆರಿಸಿಕೊಂಡು ಅದರಂತೆ ನಮ್ಮಲ್ಲಿ ಸಂಘಟನೆ, ವ್ಯವಸ್ಥೆ ಮಾಡಬೇಕಾಗಿದೆ.

ಹಿಂಸೆ, ಅಹಿಂಸೆ ಎರಡರ ಶಕ್ತಿ ಸಾಮರ್ಥ್ಯಗಳನ್ನು, ಕುಂದು ಕೊರತೆಗಳನ್ನು ವಿಶದವಾಗಿ ಅರ್ಥಮಾಡಿಕೊಳ್ಳದಿದ್ದರೆ ನಮ್ಮ ಆಯ್ಕೆ ವಿಚಾರಪಕ್ವವಾಗಲಾರದು. ಈ ಲೇಖನಮಾಲೆಯಲ್ಲಿ ನಾನೀ ಪ್ರಶ್ನೆಯ ಜಿಜ್ಞಾಸೆ ಮಾಡುತ್ತೇನೆ. ನನ್ನ ಈ ಮನೋಮಥನ ಓದುಗರಿಗೂ ನೆರವಾದೀತೆಂದು ನನ್ನ ಆಶೆ. ಸಾವು ಬದುಕಿನ ಪ್ರಶ್ನೆ ಬಂದಾಗ, ಹಿಂಸೆಗಿಂತ ಅಹಿಂಸೆ ನೀತಿವಂತವಾದುದು ಎಂದರೆ, ಜನಸಾಮಾನ್ಯಕ್ಕೆ ಅಷ್ಟರಿಂದಲೆ ಅದು ರುಚಿಸದು ಎಂದು ನನ್ನ ಪೂರ್ವಪಕ್ಷ. ವಿಪತ್ತು ಇದಿರಿಗೆ ಬಂದಾಗ ಸಾಧಾರಣವಾಗಿ ಬಹುಜನರ ನೀತಿಯ ನಾಡಿ ನಿಂತುಹೋಗುತ್ತದೆ.

ಆದರೆ ನಮ್ಮ ಪುಣ್ಯಕ್ಕೆ ಸೆಪ್ಟಂಬರ್ ೧೯೩೯ ರಿಂದೀಚೆಗೆ ನಡೆದ ಸಂಗತಿಗಳಿಂದ ನಮಗೆ ಹಿಂಸೆಯಲ್ಲೂ ನಂಬಿಕೆ ಕಡಮೆಯಾಗಿದೆ. ಹೋದ ವರ್ಷ ಜವಾಹರಲಾಲ ನೆಹರು ಒಂದು ಹೇಳಿಕೆ ಕೊಟ್ಟರು.

"........ ಈ ಯುದ್ಧ, ಅದಕ್ಕೆ ಪೂರ್ವಭಾವಿಯಾಗಿ ನಡೆದ ಸಂಗತಿಗಳು, ಹಿಂಸೆ ಕೇವಲ ವ್ಯರ್ಥವೆಂಬುದನ್ನು ನನಗೆ ಮನದಟ್ಟಾಗಿಸಿವೆ. ಅದರಲ್ಲೂ ಸದ್ಯದ ಪರಿಸ್ಥಿತಿಯಲ್ಲಿ ಹಿಂದುಸ್ತಾನದಲ್ಲಿ, ಹೊರಗಿನಿಂದ ದಂಡೆತ್ತಿಬರುವ ಪ್ರಬಲರನ್ನು ಇದಿರಿಸಲು

ನಾವು ಹಿಂಸಾಪೂರ್ವಕ ನಿರೋಧವನ್ನು ಏರ್ಪಡಿಸುತ್ತೇವೆಂಬುದು ವ್ಯರ್ಥ. ಇವೊತ್ತಿನ ವಿಷಮಸಮಯದಲ್ಲಂತೂ ಅದು ಸಾಧ್ಯವೇ ಇಲ್ಲ. ...... "

ಎಲ್ಲ ವಿಚಾರವಂತರೂ ಹೇಳಬಹುದಾದ ಮಾತು ಇದು. ಮನಶ್ಶಾಸ್ತ್ರದ ನ್ಯಾಯವೇ ಒಂದಿದೆ. ಎಂಥ ದುರ್ವಾರ ಅಸ್ತ್ರವೇ ಆಗಲಿ ಅದರಲ್ಲಿ ನಂಬಿಗೆಯಿಲ್ಲದವರ ಕೈಯಲ್ಲಿ ಅದು ಬರೀ ತೃಣ; ಕೇವಲ ನಿರ್ಬಲ. ವಾನ್‌ಡರ್ ಗೊಲ್ಟೆಜ್ ಹೇಳಿದಾರೆ:

'ವೈರಿ ಸೇನೆಯನ್ನು ಸಂಹರಿಸುವುದಲ್ಲ ಮುಖ್ಯ ; ಅವರ ಧೈರ್ಯವನ್ನು ನಾಶಮಾಡುವುದು; ಅವರ ಗುರಿ ತಪ್ಪು ಎಂದು ತಿಳಿಸಿಕೊಟ್ಟ ದಿನವೇ ನೀವು ಗೆದ್ದಹಾಗೆ.'

(ಅಹಿಂಸೆಯಬಲ—ರಿಚರ್ಡ್ ಗ್ರೇಗ್)

ಇದರ ಅರ್ಥ—ನಮಗೆ ಯಾವುದರಲ್ಲಿ ನಂಬಿಗೆಯಿಲ್ಲವೋ ಅಂಥ ಆಯುಧವನ್ನು ನಾವು ಸಫಲವಾಗುವಂತೆ ಪ್ರಯೋಗಿಸಲಾರೆವು ಎಂದು. ಅಂತೇ ಕೇವಲ ಸ್ವಹಿತಕ್ಕಾಗಿಯಾದರೂ ಅಹಿಂಸೆಯ ವ್ಯಾಪ್ತಿ ಅರ್ಥಗಳನ್ನು ತಿಳಿದುಕೊಳ್ಳುವುದು, ಅದನ್ನೊಂದು ಮಹಾಸ್ತ್ರವಾಗಿ ಮಾಡಿ ಮನೆಮಾರು - ಪ್ರಾಣ ಮಾನ ಸುಕ್ಷೇಮವಾಗಿರುವಂತೆ, ಎಲ್ಲರಿಗೂ ಅಭಯಕೊಟ್ಟು ಗೌರವ ಸ್ವಾತಂತ್ರ್ಯಯುಕ್ತವಾದ ರಾಷ್ಟ್ರಜೀವನ ನಡೆಸಲು ಸಾಧ್ಯವಿಲ್ಲವೆ ಎಂಬುದನ್ನು ಪರ್ಯಾಲೋಚಿಸಬೇಕು.

---

# ೨
# ಅವಿಹಿಂಸೆ-ಅಹಿಂಸೆ

ಮೊದಲೇ ಹೇಳಿದಂತೆ ಹಿಂಸೆಯೆಂದರೇನೋ ನಮಗೆ ಗೊತ್ತಿದೆ. ಅದಕ್ಕೆ ವಿರುದ್ಧವಾದ ಅವಿ - ಹಿಂಸೆಯನ್ನು ಅರ್ಥ ಮಾಡಿಕೊಳ್ಳುವುದೂ ಕಷ್ಟವಲ್ಲ. ಹಿಂಸೆಯೆಂದರೆ— ದ್ವೇಷ, ಪ್ರತಿಹಿಂಸೆ, ವೈರ, ಯುದ್ಧ, ಕಠೋರತೆ, ದೌಷ್ಟ್ಯ, ಮೋಸ, ಪೀಡೆ, ಅತಿಕ್ರಮಣ, ಅಪಹರಣ ಇತ್ಯಾದಿಯಾದರೆ, ವಿ - ಹಿಂಸೆಯೆಂದರೆ— ಪ್ರೀತಿ, ಕ್ಷಮೆ, ಸ್ನೇಹ, ಶಾಂತಿ, ದಯೆ, ಸೌಜನ್ಯ, ಸರಳತೆ, ಸೇವೆ, ಸಂರಕ್ಷಣೆ, ಔದಾರ್ಯ, ದಾನ ಇತ್ಯಾದಿ. ಮನಸ್ಸಿದ್ದರೆ ಮನುಷ್ಯ ಅಹಿಂಸಾನುಯಾಯಿಯಾಗಿ—ಎಂದರೆ ಉದಾರಿಯಾಗಿ, ಅನುಗ್ರಹಶಾಲಿಯಾಗಿ, ನಿಸ್ವಾರ್ಥಿಯಾಗಿ—ಇರಬಲ್ಲನೆಂದು ಒಪ್ಪಬೇಕು. ಆದರೆ ಯಾರ ಬಲವಂತಕ್ಕೂ ಯಾರೂ ಅವಿಹಿಂಸಾಪಂಥಿಯಾಗಲು ಸಾಧ್ಯವಿಲ್ಲ. ಇದು ಸ್ಪಷ್ಟವಾಗಿಯೆ ಇದೆ. ಸ್ವತಂತ್ರನಾದವನ ಕೃತಿ ಅಥವಾ ಲಕ್ಷಣ ಅದು. ತಪ್ಪು ಕೆಲಸಕ್ಕಾಗಿ ಪ್ರೀತಿ ಕರೆಯಲಾದೀತೆ ? ಇತ್ತ ಒಂದು ಹಕ್ಕನ್ನು ಸಾಧಿಸಬಯಸಿ, ಅತ್ತ ಔದಾರ್ಯ(ಅವಿ-ಹಿಂಸೆ) ತೋರಲು ಬಂದೀತೆ, ಒಂದೇ ಗಳಿಗೆಯಲ್ಲಿ ? ಗಾಂಧೀಜೀ ಹೇಳುವುದು ಹೀಗೆ : ನಿಮ್ಮ ಹಕ್ಕನ್ನು ನೀವು ಅಹಿಂಸೆಯಿಂದ, ಎಂದರೆ ನಿಮ್ಮದನ್ನು ಅಪಹರಿಸಿದ ಆಕ್ರಮಣಗಾರರಿಗೆ ಹಿಂಸೆಕೊಡದೆಯೆ ಸಾಧಿಸಬಹುದು. ಆದ್ದರಿಂದ ಈ ಅಹಿಂಸಾ ವಿಧಾನಕ್ಕೂ ಅವಿಹಿಂಸೆಗೂ ಇರುವ ಭೇದವನ್ನು ತಿಳಿಯಬೇಕು. ಅಪಹೃತವಾದ ಹಕ್ಕುಗಳನ್ನು ಮತ್ತೆ ಗಳಿಸಲು, ಇರುವುದನ್ನು ಉಳಿಸಿಕೊಳ್ಳಲು ಅಹಿಂಸಾ ಮಾರ್ಗ ಎಷ್ಟುಮಟ್ಟಿಗೆ ಫಲಕಾರಿ, ಅದರ ನಿಯಮಗಳೇನು

ಎಂಬುದನ್ನು ಪರಿಶೀಲಿಸಿದರೆ ನಮ್ಮ ರಾಷ್ಟ್ರೀಯ, ಸಾಮಾಜಿಕ ಉದ್ದೇಶಗಳಿಗೆ ಸಾಕು.

ಒಂದು ಗಳಿಗೆ - ಹಿಂಸೆ, ಅವಿಹಿಂಸೆಗಳಿಗೆ ಅಶುಭ, ಶುಭ ಎಂಬ ಪದಗಳನ್ನು ಬಳಸೋಣ. ಶುಭಾಶುಭಗಳ ನಡುವೆ ಆ ಕೊನೆಯಿಂದ ಈ ಕೊನೆಯುವರೆಗೆ ಎಷ್ಟೋ ವಿಶಾಲ ಪ್ರದೇಶ ವಿದೆ. ಶುಭ ಎಂದರೆ ಕಲ್ಯಾಣಕೃತಿ; ನಿಸ್ವಾರ್ಥದಿಂದ ಪರ ಹಿತಕ್ಕಾಗಿ ಮಾಡಿದ ಕೆಲಸ. ಅವನ್ನು **ಪರಾರ್ಥ** ಎನ್ನುತ್ತಾರೆ. ಆದರೆ **ಪರಾರ್ಥ**ಕ್ಕಾಗಿ ಮಾಡದ ಕೆಲಸವೆಲ್ಲವೂ ಅಶುಭವಲ್ಲ. ಅಶುಭವಲ್ಲದ, ವಿನಾಶಕಾರಿಯಿಲ್ಲದ ಸ್ವಾರ್ಥವಿದೆ. ನನ್ನ ಹೊಲ ವನ್ನು ನನಗೆ ಬಿಟ್ಟುಕೊಡೆಂದರೆ, ನನ್ನ ಸಾಲವನ್ನು ಕೊಟ್ಟು ಬಿಡೆಂದರೆ, ಆದು ಪರಾರ್ಥವಾದ ಶುಭಕಾರ್ಯವಲ್ಲವಾಗಲಿ ಹೀನ ಸ್ವಾರ್ಥಗ ಅಶುಭಕಾರ್ಯವೂ ಅಲ್ಲ. ಈ ಬಯಕೆಯಲ್ಲಿರುವ ಸ್ವಾರ್ಥವು ಹೀನವೂ ಅಲ್ಲ, ಲಜ್ಜಾಸ್ಪದವೂ ಅಲ್ಲ. ಅಷ್ಟೇ ಅಲ್ಲ. ನನ್ನ ಸ್ವಾರ್ಥ ಸರಿಯಾದುದು ನ್ಯಾಯವಾದುದು ಎಂದೇನು.

ನಮ್ಮ ಕಲಹಗಳಲ್ಲಿ ಚರ್ಚೆಗೆ ಬರುವುದು ಶುಭಾಶುಭಗಳ ಮಾತಲ್ಲ: ನ್ಯಾಯವಾದ ಯೋಗ್ಯವಾದ ಸ್ವಾರ್ಥ ಒಂದುಕಡೆ - ನ್ಯಾಯದಸೋಗಿನ ಅಥವಾ ಅನ್ಯಾಯದ ಸ್ವಾರ್ಥದಿಂದ ತುಂಬಿದ ಅಶುಭ ಒಂದುಕಡೆ. ಸಮಸ್ಯೆ ಇದು: ಅಶುಭ ಮಾರ್ಗದಲ್ಲಿ ಹೆಜ್ಜೆಹಾಕದೆ, ನ್ಯಾಯವಾದ ಸ್ವಾರ್ಥವೆಂದು ನಾವು ತಿಳಿದುದನ್ನು ಅನ್ಯಾಯದ ಸ್ವಾರ್ಥ ಅಶುಭಗಳೊಂದಿಗೆ ಹೋರಾಡಿ ಗಳಿಸು ವುದು ಹೇಗೆ ಎಂಬುದು. ಇದೇ ವ್ಯಾವಹಾರಿಕ ಅಹಿಂಸೆ.

ಅಹಿಂಸೆಯಲ್ಲಿ ಹಿಂಸೆಗೆ ಸ್ಥಳವೇ ಇಲ್ಲ. ಆದರೆ ಅವಿಹಿಂಸೆಗೆ ಸ್ಥಳವಿಲ್ಲದಿಲ್ಲ. ಅಥವಾ ಹೀಗನ್ನೋಣ. ಸ್ವಾರ್ಥವೆಲ್ಲವೂ

ಅಶುಭವಲ್ಲ ; ಒಂದೊಂದು ಸಲ ಅದರಲ್ಲಿ ಕಿಂಚಿತ್ ಶುಭವೂ ಇರಬಹುದು. ಅಂದರೆ **ಅಶುಭವಲ್ಲದ, ಕಿಂಚಿತ್ ಶುಭ ಮಿಶ್ರ ವಾದ ನ್ಯಾಯ ಸ್ವಾರ್ಥವು ಅಹಿಂಸೆಯ ವ್ಯಾವಹಾರಿಕ ಲಕ್ಷಣ** ಇದು ಸಂಪೂರ್ಣ ಅಹಿಂಸೆಯಲ್ಲ. ಸಂಪೂರ್ಣ ಅಹಿಂಸೆಯೆಂದರೆ ಅವಿಹಿಂಸೆ, ಶುಭ, ಪರಾರ್ಥ. ತನ್ನ ಹಕ್ಕು ನ್ಯಾಯವೆನಿಸಿ, ಅದನ್ನು ಸಾಧಿಸಬೇಕೆನ್ನುವವನು ನ್ಯಾಯವಾಗಿ ನಡೆದಾನು; ಅಹಿಂಸೆ ಯನ್ನೇ ಅವಲಂಬಿಸಿಯಾನು; ಹೋರಾಟ ಮುಗಿದಮೇಲೆ ಶುಭ ಬುದ್ಧಿಯಿಂದ ಉದಾರಿಯೂ ಆದಾನು. ಆದರೆ ಕೇವಲ ಶುಭದ ಕಲ್ಯಾಣಮಾರ್ಗ ತುಳಿಯಲಾರ. **ಹೋರಾಟದಲ್ಲಿ** ಅವನ ಕಲ್ಯಾಣಬುದ್ಧಿ ಕೃತಿಗೆ ಇಳಿಯದೆ ಮೇಲೇ ನಿಲ್ಲುತ್ತದೆ. ಉದ್ದೇಶ ದಲ್ಲಂತೂ ಶುಭವಿದ್ದೇ ಇರಬೇಕಲ್ಲ.

ಈ ವ್ಯಾವಹಾರಿಕ ಅಹಿಂಸೆಯನ್ನು ವಿಸ್ತಾರ ಪ್ರಮಾಣದಲ್ಲಿ ವ್ಯವಸ್ಥೆಗೊಳಿಸಲು ಸಾಧ್ಯವೆ? ಅದು ಪರಿಣಾಮಕಾರಿಯಾದೀತೆ? ಅದರ ವ್ಯಾಪ್ತಿಯೇನು? ದಾರಿ ಯಾವುದು? ನೋಡೋಣ.

---

## ೩

# ಸಾಧಾರಣ ಮನುಷ್ಯ

ಮುಂಬರಿವ ಮುನ್ನ ಕೆಲವು ಮೂಲ ಸಿದ್ಧಾಂತಗಳನ್ನು ಗಮನಿಸೋಣ. ಮೂಲದಲ್ಲಿ ಒಪ್ಪಿಗೆಯಿಲ್ಲದಿದ್ದರೆ ಉಳಿದ ತರ್ಕ ಹೇಗೆ ಸಮ್ಮತವಾದೀತು? ನನ್ನೀ ಪೂರ್ವಪಕ್ಷವನ್ನು ಎಲ್ಲರೂ ಒಪ್ಪಿಯಾರೆಂದು ನಂಬಿದೇನೆ.

ಮನುಷ್ಯಲೋಕದಲ್ಲಿ ಬಹುಜನಕ್ಕೆ ದುರಾಸೆ, ಅಶುಭ ಗಳೆಂದರೆ ಅಸಹ್ಯವೆಂದು ನನ್ನ ನಂಬಿಗೆ. ಶುಭ ಪ್ರವೃತ್ತಿ

ಯನ್ನು ಕಂಡರೆ ಅವರಿಗೆ ಯಾವಾಗಲೂ ಗೌರವವುಂಟು ; ಶುಭ ಮಾರ್ಗದಲ್ಲಿ ಸ್ವಲ್ಪದೂರ ನಡೆದೂ ನಡೆಯುತ್ತಾರೆ. ಬೇಸಾಯ, ಕೈಗಾರಿಕೆ ; (ಯುದ್ಧ ಸಂಬಂಧವಿಲ್ಲದ) ಉದ್ಯೋಗ ವಾಣಿಜ್ಯ ಗಳ ತಳಹದಿಯಮೇಲೆ ಕಟ್ಟಿದ ಎಲ್ಲ ನಾಗರಿಕತೆಗಳಲ್ಲೂ ಬಹು ಸಂಖ್ಯಾಕರು ಈ ಗುಂಪಿನವರೇ. ದರೋಡೆಗಾರರಲ್ಲಿ, ನೆಲೆಯಿಲ್ಲದೆ ತಿರುಗುವ ಜನರಲ್ಲಿ ಈ ಗುಣ ಕಡಮೆ. ಯುದ್ಧೋದ್ಯೋಗ, ಯುದ್ಧದ ಕೈಗಾರಿಕೆಗಳಿಂದ ಬದುಕುವವರಲ್ಲೂ ಅಷ್ಟೆ.

ಮನುಷ್ಯರಲ್ಲಿ ಅಧಿಕಾಂಶ ಜನಕ್ಕೆ ಹಿಂಸೆ ಅಸಹ್ಯವೆಂದರೆ ಅವರಿಗೆ ಹಿಂಸೆಮಾಡುವ ಸಾಮರ್ಥ್ಯವಿಲ್ಲವೆಂದಾಗಲಿ, ಹಿಂಸಾ ಪಂಥಿಯಾದ ನಾಯಕನ ಕೈಕೆಳಗೆ ಅವರನ್ನು ಹಿಂಸಾಕೃತಿಗೆ ಸಂಘಟಿಸಿ ಕಟ್ಟುವುದು ಸಾಧ್ಯವಿಲ್ಲವೆಂದಾಗಲಿ ಅಲ್ಲ. ಒಂ ದೊಂದುಸಲ ಹಿಂಸಾಮದದಿಂದ ಉನ್ಮತ್ತರಾಗಲಾರರೆಂದೂ ಅಲ್ಲ. ಆದರೆ ಸ್ವಭಾವವಾಗಿ ಹಿಂಸಾಪ್ರಿಯರಲ್ಲ, ಅಹಿಂಸಾ ವಿರೋಧಿ ಗಳಲ್ಲ, ದೃಢವಾಗಿ ಉಪದೇಶ ಮಾಡಿದರೆ ಹಿಂಸೆಯನ್ನು ಬಿಟ್ಟು ಬಿಡಲಾದವರೂ ಅಲ್ಲ. ಅಷ್ಟೇಕೆ ? ಹಿಂಸೆ ಅಶುಭಗಳನ್ನೊಕ್ಕಡೆ ಅಹಿಂಸೆ ಔದಾರ್ಯಗಳನ್ನೊಕ್ಕಡೆ ಇಟ್ಟು ಒಂದನ್ನಾಯ್ದುಕೊಳ್ಳಿ ಎಂದರೆ ಬಹುಜನ ಅಹಿಂಸೆ ಔದಾರ್ಯಗಳನ್ನೇ ಆರಿಸಿಕೊಂಡಾರು ; ತಮ್ಮ ನಿತ್ಯದ ಬದುಕಿಗೆ ಅದನ್ನೇ ಆರಿಸಿಕೊಳ್ಳುತ್ತಾರೆ.

ಭಾರತದೇಶವೊಂದೇ ಅಲ್ಲ, ಸ್ಥಿರವಾದ ಜನಾಂಗ ಇರುವ ಎಲ್ಲ ದೇಶಗಳಲ್ಲೂ ಇದು ಸತ್ಯ. ಸಾಧಾರಣ ಮನುಷ್ಯನಿಗೆ ತನ್ನ ಮನೆ, ಸಂಸಾರ, ಸೊತ್ತು, ದೇಶ, ಜನ ಎಂದರೆ ಪ್ರೀತಿ. ಅವನ್ನೂ ಪೂರ್ಣವಾಗಿ ತ್ಯಾಗಮಾಡಲು ಅವನು ಸಿದ್ಧನಲ್ಲ. ಅದಕ್ಕಾಗಿ ಕಾದಿಯಾನು, ಮಡಿದಾನು. ಹೇಗೆ ಕಾದಬೇಕೆಂಬುದೇ ಪ್ರಶ್ನೆ.

ಅದನ್ನು ನಿರ್ಣಯಿಬೇಕಾದವರು ಅವನ ದೊರೆ, ಅವನ ನಾಯ
ಕರು. ಅವನದು ಭೋಳೇ ಸ್ವಭಾವ. ಸರಿಯಾಗಿ ದಾರಿ
ತೋರಿಸದಿದ್ದರೆ ಕಲಿಸಿ ನಡಸದಿದ್ದರೆ ಅವನು ಸಹಜವಾದ ಅವ್ಯ
ವಸ್ಥಿತವಾದ ಹಿಂಸೆಗೆ ತೊಡಗಲೂಬಹುದು. ಪಕ್ಷಿಗಳು, ಮೃಗ
ಗಳು ಹಾಗೆ ಮಾಡುತ್ತವೆ. ಆದರೆ ಸಾಧಾರಣ ಮಾನವನಿಗೆ
ತಾನು ನಂಬಿದ ನಾಯಕನಿಟ್ಟ ಅಡಿಯಲ್ಲಿ ಅಡಿಯಿಡುವ ಇಷ್ಟ
ವುಂಟು. ಬಾಬರ್, ಶಿವಾಜಿ, ಹಿಟ್ಲರ್ ಆಗಲಿ, ಬುದ್ಧ, ಗಾಂ
ಧೀಜಿಯಾಗಲಿ ಒಂದೇಬಗೆಯ ಶ್ರದ್ಧೆಯಿಂದ ಅನುಸರಿಸುತ್ತಾನೆ.

ಪ್ರತಿಯೊಂದು ಯುಗದಲ್ಲೂ ಪ್ರತಿಯೊಂದು ಸಮಾಜದಲ್ಲೂ
ಕೆಲವರು ಅಸಾಧಾರಣ ಪುರುಷರು ಹುಟ್ಟುತ್ತಾರೆ. ಅವರ
ಸ್ವಭಾವ ಅಸಾಧಾರಣ ಶುಭಪ್ರವೃತ್ತಿಯವಾದರೂ ಆಗಬಹುದು;
ಅಸಾಧಾರಣ ಅಶುಭಪ್ರವೃತ್ತಿಯವಾದರೂ ಆಗಬಹುದು. ಶುಭ
ವಾದರೆ ಅತ್ಯಂತ ಶುಭಕರವಷ್ಟೇ ಅಲ್ಲ, ಅದರಲ್ಲಿ ತೀವ್ರತರ
ಆಸಕ್ತಿ. ಅಶುಭವಾದರೆ ಅದರಲ್ಲಿ ವಿಪರೀತ ರಾಗ. ಇಬ್ಬ
ರಿಗೂ ಜನಜಂಗುಳಿಯನ್ನು ತಮ್ಮ ಹಿಂದೆ ಸೆಳೆದೊಯ್ಯಲು ಬೇಕಾ
ದಷ್ಟು ಬುದ್ಧಿಶಕ್ತಿ, ಬೋಧನಶಕ್ತಿಯಿದೆ, ಶುಭನಾಯಕ ಮಾನ
ವನ ಉತ್ತಮ ಪ್ರಕೃತಿಯನ್ನು ಹೊರಗೆ ಎಳೆಯುತ್ತಾನೆ. ಅಶುಭ
ನಾಯಕಹೀನಸ್ವಭಾವವನ್ನು ಸೆಳೆಯುತ್ತಾನೆ. ಕೆಲವರಿಗೆ ಅದರ
ಸೆಳೆತಹೆಚ್ಚು; ಕೆಲವರಿಗೆ ಇದರ ಸೆಳೆತ ಹೆಚ್ಚು. ಆದರೆ ಸಾಧಾ
ರಣವಾಗಿ ಬಹುಜನಕ್ಕೆ ದೃಢಗುಣವಿಲ್ಲ; ಒಮ್ಮೆ ಇದು, ಒಮ್ಮೆ
ಅದು, ಎರಡೂ. ಗಾಳಿಬೀಸಿದಹಾಗೆ, ಅಲೆ ಸುಳಿದಹಾಗೆ. ಆ
ಜನರಲ್ಲಿ ಸ್ಥಿರವಾದ ಸ್ಪಷ್ಟವಾದ ಪರಿಣಾಮ ಹುಟ್ಟಿಸುವುದಿಲ್ಲ.
ಶುಭಾಧಿಕ್ಯವೂ ಅಶುಭಾಧಿಕ್ಯವೂ ಅಲೆಗಳಂತೆ ಕೆಲವುಕಾಲ ಇದ್ದು

ತರುವಾಯ ಕರಗಿಹೋಗುತ್ತವೆ. ಸಾಧಾರಣವಾಗಿ ಅಶುಭದ ಬಿರುಗಾಳಿಗಿಂತ ಶುಭದ ಸುಂಟರಗಾಳಿಯೇ ಹೆಚ್ಚು ಪ್ರೀತ್ಯಾಸ್ಪದ, ಗೌರವಾನ್ವಿತ. ಆದರೆ ಅದೇನು ವಿಚಿತ್ರವೋ ಈ ಎರಡು ಬಗೆಯ ನಾಯಕರ ಹೆಸರನ್ನೂ ಜನ ಒಂದೇ ರೀತಿಯ ಗೌರವದಿಂದ ಕಾಣುತ್ತಾರೆ. ಆದರೂ ಶುಭೋತ್ಕರ್ಷದ ಕಾಲ ಮತ್ತೆ ಬರಲಿ ಎಂಬ ಆಸೆ ಜನರಿಗಿರುವುದನ್ನೂ, ಶುಭಕಾಲದಲ್ಲಿ ಅವರಿಗಿರುವ ಆದರ ಪ್ರೀತಿಗಳನ್ನೂ ನೋಡಿದರೆ ಸಾಧಾರಣ ಮನುಷ್ಯನಿಗೆ ಹಿಂಸೆ ಅಶುಭ ಎಂದರೆ ಅಸಹ್ಯ, ಅಹಿಂಸೆ ಶುಭ ಎಂದರೆ ಇಷ್ಟ ಎಂಬುದು ತಿಳಿಯುತ್ತದೆ.

---

೪

# ಸಾಮಾಜಿಕ ಶುಭವರ್ತನೆಯ ಲಕ್ಷಣವೂ ಹಿಂಸೆಯೂ

ಇನ್ನೂ ಒಂದು ಹೆಜ್ಜೆ ಹಾಕೋಣ.

ಲೋಕದಲ್ಲಿ ಜನಕ್ಕೆ ಶುಭವೆಂದರೆ ಇಷ್ಟವಷ್ಟೇ ಅಲ್ಲ; ಆ ಪ್ರೀತಿಗೆ ಕೆಲವು ತನಿಯಾದ ಲಕ್ಷಣಗಳಿವೆ. ತಮ್ಮ ನಾಯಕರು ಪ್ರೇರೇಪಿಸದೆ ಇದ್ದರೆ, ಹತ್ತಿರದ ವೈರಿಗಿಂತ ದೂರದ ವೈರಿಯಮೇಲೆ ಕಡಮೆ ದ್ವೇಷ. ದೂರದ ವೈರಿ ಹೆಚ್ಚು ಪೀಡೆ ಕೊಟ್ಟಿದ್ದರೂ ಪರವಾಯಿಲ್ಲ. ಇನ್ನೂ ಒಂದು: ಹೇಡಿಯಾದ ಗುಪ್ತಶತ್ರುವಿಗಿಂತ ಪ್ರಬಲನಾದ ಬಹಿರಂಗವೈರಿಯ ಬಗ್ಗೆ ಹೆಚ್ಚು ಔದಾರ್ಯ. ಯೂರೋಪಿನಲ್ಲಿ ನೆಪೋಲಿಯನ್ ಹರಡಿದ ಸಂಕಟ, ದುಃಖ ಯಾವ ಎಂಟೆದೆಯ ದರೋಡೆಗಾರನೂ ಹರಡಲಾರ. ಆದರೂ ಅವನು ಸೋತಾಗ ಅವನನ್ನು ಕೊಲ್ಲಬೇಕೆಂಬ ಬಯಕೆ

ಸಾಧಾರಣವಾಗಿ ಯಾರಿಗೂ ಇರಲಿಲ್ಲ. ನೆಪೋಲಿಯನ್ನಿನ ಸ್ಥಿತಿ ಗಿಳಿದರೆ ನಾಳೆ ಹಿಟ್ಲರನನ್ನೂ ಅಷ್ಟೆ. ಹೀಗೆ ಮಾಡಲು ನಾಯಕರ ಮನಸ್ಸಿನಲ್ಲಿ ರಾಜಕೀಯ ಕಾರಣಗಳಿರಬಹುದು. ಸಾಧಾರಣ ಜನರಿಗೆ ರಾಜಕೀಯ ವಿವೇಕವಿಲ್ಲ; ಧೀರನಾದ ವೈರಿಯ ಬಗ್ಗೆ ಇರುವ ಗೌರವವೇ ಕಾರಣ. ಇದೇ ಜನ ತಮ್ಮ ಊರನ್ನು ಲೂಟಿಮಾಡಲು ಬಂದ ದರೋಡೆಗಾರರ ದಳಪತಿ ತಮ್ಮ ಕೈಗೆ ಸಿಕ್ಕಿದ್ದರೆ ಅವನನ್ನು ನಿರ್ದಯೆಯಿಂದ ಬಲಿಹಾಕುತ್ತಿದ್ದರು. ವಾಸ್ತವವಾಗಿ ಅವನಿಂದ ಆದ ಹಿಂಸೆ ಅತ್ಯಲ್ಪವೇ ಆಗಿದ್ದರೂ ಅಷ್ಟೆ. ಕಾರಣ: ದರೋಡೆಗಾರ ಪ್ರತ್ಯಕ್ಷ ವೈರಿ, ನೆಪೋಲಿಯನ್ ಪರೋಕ್ಷ ವೈರಿ. ಸಾಲದ್ದಕ್ಕೆ ಧೀರ, ಬಹಿರಂಗ ಶತ್ರು.

ನಮ್ಮ ದೇಶದಲ್ಲಿ ನಮ್ಮ ನಮ್ಮ ರಾಜಕೀಯ ಪಕ್ಷಿಗಳ ಮೇಲಿದ್ದಷ್ಟು ಹಗೆ ಬ್ರಿಟಿಷರಮೇಲೆ, ಅವರ ಪ್ರತಿನಿಧಿಗಳ ಮೇಲೆ ಸಾಮಾನ್ಯಜನರಿಗೆ ಇಲ್ಲದಿರಲು, ಅವರಬಗ್ಗೆ ಹೆಚ್ಚು ಅಹಿಂಸೆಯ ಬುದ್ಧಿ ತೋರಲು ಇದೇ ಕಾರಣ. ನಾಯಕರಿಗಿಂತ ಸ್ಥಳೀಯ ಕೆಲಸಗಾರರ ಮೇಲೆಯೇ ಹೆಚ್ಚು ವಿಷಕಾರಲೂ ಇದೇ ಕಾರಣ. ನಿಜವಾದ ವೈರ ನಾಯಕರ ಮೇಲೆ, ಬ್ರಿಟಿಷರ ಮೇಲೆ ಎಂಬುದು ಅವರಿಗೆ ಗೊತ್ತಿಲ್ಲದಿಲ್ಲ. ಆದರೂ ಹಾಗೆ.

ಇದೇ ರೀತಿ ಅನೇಕರಿಗೆ ಸೂಕ್ಷ್ಮವಾದ ಹಿಂಸೆ ಸ್ಪಷ್ಟವಾಗಿ ದೃಗ್ಗೋಚರವಾಗದು. ಪರಶೋಷಣ, ಮಾದಕಪದಾರ್ಥಸೇವನಾ ಪ್ರೋತ್ಸಾಹ, ವಿಲಾಸಪ್ರಿಯತೆ ಇತ್ಯಾದಿ ಸೂಕ್ಷ್ಮಹಿಂಸೆ ಜನಕ್ಕೆ ಕೊಲೆ, ಹೀಡೆ, ಲೂಟಿ, ಅತ್ಯಾಚಾರಗಳಂಥ ಪ್ರತ್ಯಕ್ಷಹಿಂಸೆಯ ಹಾಗೆ ಅರ್ಥವಾಗುವುದಿಲ್ಲ. ಅದರ ಪರಿಣಾಮವಾಗಿ ಪ್ರತ್ಯಕ್ಷ ಹಿಂಸೆಗೆ ತೋರುವ ಪ್ರತೀಕಾರ ಬುದ್ಧಿಯನ್ನು ಪರೋಕ್ಷ ಹಿಂಸೆಗೆ

ತೋರರು ; ಅದಕ್ಕೆ ಅಹಿಂಸಾಬುದ್ಧಿಯನ್ನು ತೋರುತ್ತಾರೆ. ಯಾವುದಾದರೊಂದು ನಿಮಿತ್ತಕ್ಕಾಗಿ ಜನರನ್ನು ಹೋರಾಟಕ್ಕೆ ಎಳೆಯುವುದಕ್ಕಿಂತ ತತ್ವಕ್ಕಾಗಿ, ಸತ್ಯಕ್ಕಾಗಿ ದೀರ್ಘಕದನಕ್ಕೆ ಪ್ರೇರೇಪಿಸುವುದು ಕಷ್ಟತರವಾಗಿರಲು ಇದೇ ಕಾರಣ. ಪರಕೀಯರ ಆಕ್ರಮಣದಿಂದ ಆಗುವ ಹಿಂಸೆ ಅತಿ ಸೂಕ್ಷ್ಮ ; ಸಕ್ಕರೆ ಸವರಿದ ಕಹಿಗುಳಿಗೆ. ಸಾಧಾರಣ ಮನುಷ್ಯನಿಗೆ ಅದೊಂದು ಪೀಡೆಯೆನಿಸುವುದೇ ಇಲ್ಲ. ವಾಸ್ತವವಾಗಿಯೂ ದುರ್ಭರವಾದ, ಅಸಹನೀಯವಾದ ವಿನಾಶ ಎನ್ನುವುದು ಅವನಿಗೆ ಅರ್ಥವಾಗುವುದೇ ಇಲ್ಲ. ಅದರಲ್ಲೂ—ಯಾರೇ ಬಂದು ಸೀಮೆ ಗೆಲ್ಲಲಿ, ನಮ್ಮ ಅಣ್ಣ ತಮ್ಮಂದಿರು, ಬಂಧುಬಳಗದವರ ಮೂಲಕವೇ ಆಡಳಿತ ನಡಸುತ್ತಿರುವ ನಮ್ಮ ದೇಶದಂಥ ದೇಶದಲ್ಲಿ ಇದು ಹದಿನಾರಾಣೆ ನಿಜ. ಹಾಗೆಂದರೆ ನಮ್ಮ ಜನಕ್ಕೆ ಸ್ವರಾಜ್ಯಸಮರ ಅರ್ಥವಾಗದೆಂದಲ್ಲ ; ಬುದ್ಧಿಗೋಚರವಾಗುತ್ತದೆ. ಆದರೆ ಆ ತಿಳಿವು ತೀರಾ ದುರ್ಬಲವಾದುದು. ಅದರಲ್ಲಿ ತೀವ್ರ ಆಸಕ್ತಿ ಹುಟ್ಟಿಸುವಷ್ಟು ಬಲವಲ್ಲ. ಅಷ್ಟೇ ಅಲ್ಲ ; ಅಹಿಂಸಾ ಪ್ರಧಾನವಾದ ಮನಸ್ಸಿಗೆ ಬರೀ ಸ್ವದೇಶೀ ಸರಕಾರವೆಂದರೆ ಅಷ್ಟು ಆಸೆಯಿಲ್ಲ ; ಅದಕ್ಕೆ ಬಲವಾದ ಸ್ಥಿರವಾದ ಸರಕಾರ ಬೇಕು. ಅದರಿಂದಲೇ ಒಳನಾಡಿನಲ್ಲಿ ಅಹಿಂಸಾ ಮಾರ್ಗದಿಂದ ಕ್ರಾಂತಿ ತರಲು ಜನರ ಮನಸ್ಸು ಸಿದ್ಧವಾಗಿರುತ್ತದೆ. ಭಾರತದಲ್ಲಿ ರಾಜಕೀಯ ಹತ್ಯಗಳಾದಾಗ ಜನ ಚಪ್ಪಾಳೆ ತಟ್ಟಿ ಕ್ರಾಂತಿಕಾರರನ್ನು ಮೆಚ್ಚಿದರೂ ಅವರಿಗೆ ವಾಸ್ತವವಾಗಿ ಏನೂ ಸಹಾಯ ಮಾಡದಿರಲು ಅದೇ ಕಾರಣ. ಇದು ಹಿಂದುಸ್ಥಾನದ ವಿಶಿಷ್ಟಲಕ್ಷಣವೇನಲ್ಲ. ಎಲ್ಲ ದೇಶಗಳೂ ಹೀಗೇ.

---

೫

# ಎರಡು ಮೂಲ ಸ್ವಭಾವ

ಜನರಿಗೆ ಸಾಮಾನ್ಯವಾಗಿ ಅಹಿಂಸಾ ಪ್ರೀತಿ ಎಂಬ ಮಾತು ಕೇವಲ ಹಿಂದುಸ್ಥಾನಕ್ಕಷ್ಟೇ ಅಲ್ಲ, ಇಡೀ ಜಗತ್ತಿಗೇ ಅನ್ವಯಿಸುತ್ತದೆ. ಯಾವ ಒಂದು ದೇಶಕ್ಕಾಗಲಿ ಧರ್ಮಕ್ಕಾಗಲಿ ಜನಕ್ಕಾಗಲಿ ಅದು ವಿಶಿಷ್ಟ ಲಕ್ಷಣವಲ್ಲ. ವೈದಿಕಧರ್ಮದ ಸಂದೇಶವಾಗಲಿ, ಸಾಧಾರಣ ಹಿಂದೂಜನಕ್ಕೆ, ಪ್ರಭುತ್ವದಬಗ್ಗೆ, ವೈರಿಯ ಬಗ್ಗೆ ಅಪರಾಧದಬಗ್ಗೆ ಇರುವ ಮನೋಭಿಪ್ರಾಯವಾಗಲಿ ಇತರ ಧರ್ಮದವರ, ಇತರ ಜಾತಿಗಳವರ ಅಭಿಪ್ರಾಯಕ್ಕೆ ಭಿನ್ನವಲ್ಲ ಅತಿ ವಿನಯದಿಂದ ಈ ಮಾತು ಹೇಳುತ್ತೇನೆ. ಇತರ ದೇಶಗಳಲ್ಲಿದ್ದಹಾಗೆ ನಮ್ಮ ದೇಶದಲ್ಲೂ ರಾಜಚಿಹ್ನೆ 'ದಂಡ; ಒರಟಾಗಿ ಹೇಳಬೇಕೆಂದರೆ ದೊಣ್ಣೆ. ರಾಮರಾಜ್ಯ ಧರ್ಮರಾಜ್ಯಗಳಲ್ಲೂ ರಾಜದಂಡದ ನಿರ್ಭಯಪ್ರಯೋಗ ಅನಿವಾರ್ಯವಾಗಿತ್ತು ಎಂದು ನಾನು ರಾಮಾಯಣ ಮಹಾಭಾರತಗಳನ್ನೋದಿ ತಿಳಿದುಕೊಂಡಿವೇನೆ. ರಾಜದಂಡಪ್ರಯೋಗ ಎಂದರೆ ಈಗಿನ ಪರಿಭಾಷೆಯಲ್ಲಿ 'ನ್ಯಾಯ ಶಿಸ್ತು ಸಂರಕ್ಷಣೆ.' ಈ ವಿಷಯದಲ್ಲಿ ಹಿಂದೂಧರ್ಮಕ್ಕೂ ಯಹೂದೀ (ಕ್ರಿಸ್ತಾನ ಸಹ) ಇಸ್ಲಾಮಿ ಧರ್ಮಗಳಿಗೂ ಏನೂ ಭೇದವಿಲ್ಲ.

ಆದರೆ ಈ ಅಭಿಪ್ರಾಯಗಳ ಜೊತೆಜೊತೆಗೇ ಪ್ರತಿಯೊಂದು ಧರ್ಮವೂ ಇನ್ನೊಂದುಬಗೆಯ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿದೆ. ಸಾಧಾರಣವಾಗಿ ಪ್ರತಿಯೊಂದು ಧರ್ಮದಲ್ಲೂ ದೇಶದಲ್ಲೂ ಎರಡುಬಗೆಯ ಸಂಸ್ಕೃತಿ ಇರುತ್ತವೆ: ಒಂದು ಶರಣಸಂಸ್ಕೃತಿ; ಇನ್ನೊಂದು ಶಿಷ್ಟಸಂಸ್ಕೃತಿ. ಅದು ಸಾಧು

ಶರಣರದು; ಇದು ಶಿಷ್ಟರದು, ಶ್ರೀಮಂತರದು. ಭದ್ರ ಸಂಸ್ಕೃತಿ ದುಷ್ಟ, ಪಾಶವೀ, ಕೇವಲ ಹಿಂಸಾಮಯ ಅಲ್ಲ. ಜಗತ್ತಿನ ಶ್ರೇಷ್ಠ ನಾಗರಿಕತೆಗಳ ಕಾಂತಿವೈಭವಗಳ ಬಹುಭಾಗಕ್ಕೆ ಈ ಶಿಷ್ಟ ಸಂಸ್ಕೃತಿಯೆ ಕಾರಣ. ಶಿಷ್ಟ ನಾಗರಿಕತೆಗಳು ಮಹಾಕಾರ್ಯ ಗಳನ್ನು ಮಾಡಿವೆ; ಬೃಹತ್ ಸ್ಮಾರಕಗಳನ್ನು ಕಟ್ಟಿವೆ; ಅಮರ ಸಾಹಿತ್ಯವನ್ನು ರಚಿಸಿವೆ; ವಿಜ್ಞಾನಕಲೆಗಳನ್ನು ಬೆಳೆಸಿವೆ. ಮಾನವಕೋಟಿ ತನ್ನ ಅದ್ಭುತಾನಂತವಾದ ಅಪರಿಮಿತ ರಚನಾ ಶಕ್ತಿಯನ್ನು ಸಾವಿರ ರೂಪಿನಲ್ಲಿ, ಶುಭ ಅಶುಭರೀತಿಗಳಲ್ಲಿ ಪ್ರಕಟಿಸಲು ದಾರಿಮಾಡಿಕೊಟ್ಟಿವೆ. ಆದರೆ ಯಾವ ದೇಶಕ್ಕೇ ಹೋಗಲಿ, ಶಿಷ್ಟ ಸಂಸ್ಕೃತಿಯ ತಳಹದಿ—ಜಾತಿ ಜನ್ಮ ಧನ ಬಲ ವಿದ್ಯೆ ತತ್ವಗಳ ಮದ; ತಾವು ಮೇಲೆಂಬ ಮದ. ಹಿಂದೂ ಧರ್ಮ ದಲ್ಲೇನು ಉಳಿದ ಧರ್ಮದಲ್ಲೇನು ಅದಕ್ಕೆ ಹಿಂಸೆ ವರ್ಜ್ಯವಲ್ಲ. ಹಿಂಸೆಗೆ ಬಹಿಷ್ಕಾರ ಹಾಕಿದ್ದು ಎಲ್ಲದೇಶಗಳ ಶರಣ ಸಂಸ್ಕೃತಿ. ಈ ಶರಣ ಸಂಸ್ಕೃತಿಯ ನಾಯಕರು ಯಾವಾಗಲೂ ಸಾಮಾನ್ಯ ಜನರೇ. ಎಲ್ಲೆಲ್ಲೂ ಅಷ್ಟೆ. ಒಂದುವೇಳೆ ಶಿಷ್ಟ ಕುಟುಂಬಗಳಲ್ಲಿ ಹುಟ್ಟಿದರೂ ಅವರ ರೀತಿಯೆಲ್ಲ ಸಾಮಾನ್ಯ ಜನರಂತೆಯೆ. ಶಿಷ್ಟ ಸಂಸ್ಕೃತಿಗೆ ಸಮಾಜದಲ್ಲಿ ಕೀಳು ಮೇಲು, ಭೇದ ವಿಭೇದ ಇರಬೇಕೆಂಬುದು ಮುಖ್ಯ. ಶರಣ ಸಂಸ್ಕೃತಿಗೆ ಈ ಭೇದ ನಾಶ ವಾಗಬೇಕೆಂಬುದು ಮುಖ್ಯ. ಅದನ್ನು ಸಾಧಿಸಲು ಅವರು ತುಳಿದ ದಾರಿ ಬಲಾತ್ಕಾರವಲ್ಲ, ಅವಿಹಿಂಸೆ.

ಎಲ್ಲ ದೇಶದಲ್ಲೂ, ಎಲ್ಲ ಜನರಲ್ಲೂ ಈ ಎರಡೂ ಸಂಸ್ಕೃತಿ ಜೊತೆಜೊತೆಗೇ ಬದುಕಿ ಬಾಳಿವೆ. ಜನರು ತಮ್ಮ ದೇಶದ ಶಿಷ್ಟ ಸಂಸ್ಕೃತಿಗೆ ಅಡಿಯಾಗಿ ತಲೆಬಾಗಿ ಬದುಕಿದರೂ ಶರಣ ಸಂಸ್ಕೃತಿಯನ್ನು ಗೌರವಿಸಿ, ತಮಗೆ ಸಾಧ್ಯವಿದ್ದಷ್ಟು

ಮಟ್ಟಿಗೆ ಶ್ರದ್ಧಾಪೂರ್ವಕವಾಗಿ ತಮ್ಮ ಬಾಳಿನಲ್ಲಿ ಅದನ್ನು ಬೆರೆಸಿ ಕೊಂಡಿದಾರೆ. ಶರಣ ಸಂಸ್ಕೃತಿಗೆ ಬಂದ ವಿರೋಧ, ಕೊಟ್ಟ ಪೀಡೆ, ಶಿಷ್ಟ ಸಂಸ್ಕೃತಿಯ ಭಕ್ತರ ಕೈವಾಡ ಆದರೆ ಅದು ಬಹುಕಾಲ ನಡೆಯದೆ, ಶರಣ ಸಂಸ್ಕೃತಿಗೆ ಸೋತು, ಜನ ಸಾಮಾನ್ಯರ ಜೊತೆಗೆ ತಾವೂ ಸೇರಿ ಆ ಪಂಥದ ಸಾಧು ಶರಣ ರನ್ನು ಪೂಜಿಸುವ ಸ್ಥಿತಿಗೆ ಬಂದಿದೆ.

ನಾನು ಹಿಂದೆ ಹೇಳಿದ್ದಕ್ಕೆ ಇದು ಒಂದು ದೃಷ್ಟಾಂತ. ಜನ ಸಾಮಾನ್ಯಕ್ಕೆ ಹಿಂಸೆ, ಅಶುಭ ಎಂದರೆ ಅಸಹ್ಯ; ಶುಭವೆಂದರೆ ಇಷ್ಟ ಎನ್ನಲು ಇದೂ ಒಂದು ರೀತಿ. ಈ ಶರಣ ಸಂಸ್ಕೃತಿ ಯನ್ನು ವಿರೋಧಿಸಲು ಶಿಷ್ಟ ಸಂಸ್ಕೃತಿಗೆ ಇರುವುದು ಒಂದೇ ದಾರಿ: ಹಿಂಸೆ. ಬೇರೆ ಇಲ್ಲ.

---

## ೬
## ಹಿಂದುಸ್ಥಾನದ ವಿಲಕ್ಷಣತೆ

ಹಿಂದುಸ್ಥಾನದ ಕೆಲವು ವಿಲಕ್ಷಣ ಗುಣಗಳನ್ನು ಗಮನಿ ಸೋಣ.

೧. ಹಿಂದೂಧರ್ಮದ ಶಿಷ್ಟ ಸಂಸ್ಕೃತಿ ಹಿಂಸೆ ಯುದ್ಧಗಳಿಗೆ ಬಹಿಷ್ಕಾರ ಹಾಕದಿದ್ದರೂ ಹಿಂದೂಧರ್ಮದ ವರ್ಣವ್ಯವಸ್ಥೆ ಯಿಂದ ಹಿಂಸೆ ಯುದ್ಧ ಕೇವಲ ಕೆಲವು ಜನರ ಕಸಬಾಗಿ ಹೋಯಿತು. ಬ್ರಿಟಿಷರು ಈಗ ಮಾಡಿರುವಂತೆ ಇದನ್ನು ಬಲ ವಂತವಾಗಿ ಮಾಡಿದ್ದರೆ, ಯೋಧವೃತ್ತಿಯನ್ನು ವಂಶಪಾರಂಪರ್ಯದ ಕಸಬಾಗಿಮಾಡಿ, ಎಷ್ಟೋ ಶತಮಾನಗಳ ಹಿಂದೆಯೇ ಕೋಟ್ಯಾಂ ತರ ಹಿಂದೂಜನರನ್ನು ನಿರಾಯುಧರನ್ನಾಗಿ ಮಾಡಿದರು ಎನ್ನ

ಬಹುದಾಗಿತ್ತು. ಹಾಗೆ ಮಾಡಲಿಲ್ಲವಾಗಲಿ, ಫಲವೇನೋ ಹಾಗೆ ಮಾಡಿದಂತೆಯೆ ಆಗಿದೆ.

ವರ್ಣವ್ಯವಸ್ಥೆ ಅಲ್ಪಸ್ವಲ್ಪ ಮಾಡಿದುದನ್ನು ಬ್ರಿಟಿಷ್ ಸರಕಾರ ಕ್ರಮವಾಗಿ ವಿಸ್ತಾರವಾಗಿ ಮಾಡಿತು. ಇಡೀ ಜನಾಂಗವನ್ನೆ ಬಹುಮಟ್ಟಿಗೆ ನಿರಾಯುಧಗೊಳಿಸಿತು.

ಈ ಶಸ್ತ್ರ ಬಹಿಷ್ಕಾರಕ್ಕೆ ಹಿಂದೂಧರ್ಮದ ಶರಣಸಂಸ್ಕೃತಿ ಮೌನವಾಗಿಯೆ ಸ್ವಾಗತಬಯಸಿತೆನ್ನಬಹುದು. ಬೌದ್ಧ, ಜೈನ, ವೈಷ್ಣವ, ಲಿಂಗಾಯಿತ, ಉಳಿದ ಎಷ್ಟೋ ಚಿಲ್ಲರೆ ಪಂಥಗಳೆಲ್ಲವೂ— ಕೆಲವು ಅಳಿದೇಹೋಗಿವೆ— ಶರಣರಿಂದ ಸ್ಥಾಪಿತವಾದವು; ಎಲ್ಲವೂ ಸಮಾನತೆ, ಅಹಿಂಸೆ, ನ್ಯಾಯಗಳ ಸಂಸ್ಕೃತಿಯನ್ನು ಕಟ್ಟಿ ಹರಡಲು ಹೆಣಗಿದವು. ಆ ಪಂಥಗಳ ಪ್ರಚಾರದಿಂದ ಯುದ್ಧಕ್ಕೇ ಅಲ್ಲ, ಪ್ರಾಣಿಹಿಂಸೆ ಮಾಂಸಭೋಜನಕ್ಕೂ ವಿರೋಧ, ಅಸಹ್ಯ ಪ್ರಾರಂಭವಾಯಿತು ಲಕ್ಷಲಕ್ಷ ಜನ ಮಾಂಸಭೋಜನ ಬಿಟ್ಟಿರುವುದು, ಕಡೆಗೆ ಹಾವನ್ನು ಕೂಡ ಕೊಲ್ಲದಿರುವುದು ಕೇವಲ ಹಿಂದುಸ್ಥಾನದಲ್ಲಿ ಮಾತ್ರವೇ.

ಹಿಂದುಸ್ಥಾನದ ಪರಿಸ್ಥಿತಿ ಹೀಗಿದೆ: **ಸಾಮಾಜಿಕವಾಗಿ** ಹಿಂದೂಜನರಲ್ಲಿ ಬಹುಭಾಗ ಕೆಲವು ಶತಮಾನಗಳಿಂದ ನಿಶ್ಶಸ್ತ್ರರಾಗಿದಾರೆ. **ಸಾಂಸ್ಕೃತಿಕವಾಗಿ** ಎಷ್ಟೋಜನ ಹಿಂದೂಗಳು— ಅವರಲ್ಲಿ ಕ್ಷತ್ರಿಯರೂ ಹೇರಳವಾಗಿದಾರೆ— ತಾವೇ ಇಷ್ಟಪಟ್ಟು ನಿಶ್ಶಸ್ತ್ರರಾಗಿದಾರೆ, ಎಂದರೆ ಒಂದುಬಗೆಯ ಶಾಂತಿವಾದಿಗಳಾಗಿದಾರೆ.* ಆದೂನಡೆದು ಆಗಲೇಕೆಲವು ಶತಮಾನ ಕಳೆದಿವೆ. ರಾಜ

*ಒಂದು ಬಗೆಯು ಶಾಂತಿವಾದಿಗಳೆಂದಿದ್ದೇನೆ. ಪ್ರಾಣಿಹಿಂಸೆ ಮಾಡಬಾರದೆನ್ನುವಷ್ಟು ದೂರವೇ ಅವರ ಅಹಿಂಸೆ. ಬದುಕಿನ ಉಳಿದ ವಿಷಯಗಳಲ್ಲಿ ಇಲ್ಲ.

**ಕೀಯವಾಗಿ** ಇಡೀ ರಾಷ್ಟ್ರ, ಹಿಂದುವೇನು ಇತರವೇನು, ಒಂದು ಶತಮಾನದಿಂದ ನಿಶ್ಶಸ್ತ್ರವಾಗಿದೆ. **ಆರ್ಥಿಕವಾಗಿ** ಇನ್ನೂ ಹೆಚ್ಚು ಜನಕ್ಕೆ, ಸುಮಸುಮಾರು ಇಡೀ ಜನಕ್ಕೆ ಆಯುಧದಿಂದ ಲಾಭವಿಲ್ಲ. ದರೋಡೆಗಾರರಿಗೆ ಸಿಗದಂತೆ ಕಾಪಾಡಿಕೊಳ್ಳಲು ಯಾರಿಗೂ ಏನೂ ಉಳಿದೇ ಇಲ್ಲ.

೨. ಹಿಂದುಸ್ಥಾನದ ಬಗ್ಗೆ ಎರಡನೇ ಅಂಶ ಅದರ ವಿಸ್ತಾರ. ರಷ್ಯಾ ಬಿಟ್ಟರೆ ಇಡೀ ಯೂರೋಪಿನಷ್ಟಿದೆ ಇದು. ಒಂದು ಕಾಲಕ್ಕೆ ಯೂರೋಪಿನಂತೆ ಇದನ್ನೂ ಒಂದು ಖಂಡ ಎನ್ನುತ್ತಿದ್ದರು. ಸಂಸ್ಕೃತದಲ್ಲಿ ಭರತಖಂಡ ಎಂದೇ ರೂಢಿ. ಈಗ ನಾವು ಪ್ರಾಂತಗಳೆಂದು ಕರೆವ ಸೀಮೆ ಆಗ ರಾಷ್ಟ್ರ, ದೇಶ ಆಗಿದ್ದವು. ಕ್ರಮೇಣ, ಸಾವಿರಾರು ವರ್ಷಗಳ ಹಿಂದೆಯೆ ಒಂದು ಸಾಮಾನ್ಯ ಸಂಸ್ಕೃತಿ ಇದನ್ನೆಲ್ಲ ಒಂದೇ ದೇಶವಾಗಿ ಬಿಗಿದು ಹಲವು ರಾಷ್ಟ್ರಗಳ ಖಂಡವನ್ನು ಒಂದೇ ದೇಶವಾಗಿ ಮಾಡಿತು. ಅಂತಃಕಲಹ, ರಾಜ್ಯಸಾಮ್ರಾಜ್ಯಗಳ ಏರಿಳಿತ, ಭಾಷಾಸಮಸ್ಯೆ, ಜಾತಿಗಳ ತೊಡಕು, ಸಾವಿರವಿದ್ದರೂ ಭಾರತದ ಭೌಗೋಲಿಕ ಅಖಂಡತೆ ನಾಡಿನವರಿಗೂ ಹೊರಗಿನವರಿಗೂ ಮನಸ್ಸಿಗೆ ಆಳವಾಗಿ ನಾಟಿ, ಇದು ಹಲವು ರಾಜ್ಯಗಳ ಸೀಮೆಯೆಂದು ಯಾರೂ ಅದನ್ನು ಕರೆಯದಹಾಗೆ ಮಾಡಿತು. ಇನ್ನೂ ಒಂದು: ಹಿಂದುಸ್ಥಾನದಲ್ಲಿ ನೆಲೆನಿಂತ ಯಾವ ಪರದೇಶೀ ದಾಳಿ

---

ಯುದ್ಧೋತ್ತೇಜಕ ವ್ಯಾಪಾರ ವಾಣಿಜ್ಯಗಳಲ್ಲಿ ನೆರವಾಗದಷ್ಟು ದೂರವಾಗಲಿ, ಯುದ್ಧಕ್ಕೆ ನೆರವಾಗುವ ಕೆಲಸ ಮಾಡಲಾರದಷ್ಟು ದೂರವಾಗಲಿ ಅವರ ಅಹಿಂಸೆ ಹೋಗುವುದಿಲ್ಲ. ಆದರೆ ಸಾವಿರಾರುಜನ ಕ್ಷತ್ರಿಯರು ಶಸ್ತ್ರತ್ಯಾಗಮಾಡಿ ಶಾಂತ ಉದ್ಯೋಗಗಳಿಗೆ ತೊಡಗಿದುದು ಶಾಂತಿವಾದದ ದಾರಿಯಲ್ಲಿ ದೊಡ್ಡ ಹೆಜ್ಜೆ ಯಿಟ್ಟಂತಾಯಿತು.

ಗಾರನೂ ಇಲ್ಲಿ ನಿಂತಮೇಲೆ ತನ್ನ ಪೂರ್ವದ ಸೀಮೆಯನ್ನು, ಭಾರತದ ಆಚಿನ ಸೀಮೆಯನ್ನು ತನ್ನ ವಶದಲ್ಲಿಟ್ಟುಕೊಳ್ಳಲು ಪ್ರಯತ್ನಪಡಲಿಲ್ಲ. ಆಫಘನಿಸ್ತಾನವೊಂದೇ ಭಾರತಕ್ಕೆ ಸೇರಿದ್ದ ಸೀಮೆ. ಭಾರತ ಸಾಮ್ರಾಟರ ಆಸೆ ಅದನ್ನು ದಾಟಿ ಹೋಗ ಲಿಲ್ಲ

೩. ಭಾರತದಲ್ಲಿ ಜನವಸತಿ ಬಲು ಸಾಂದ್ರವಾಗಿದೆ. ತನ್ನ ಜನರಿಗೆ ವಸಾಹತು ಕಲ್ಪಿಸಲೋಸುಗ ಇನ್ನೊಂದು ಸಾಮ್ರಾಜ್ಯ ದಂಡೆತ್ತಿ ಬಂದು ಇದನ್ನು ಗೆಲ್ಲುವ ಭಯವಿಲ್ಲ. ಇದನ್ನು ಶಾಶ್ವತವಾಗಿ ಸ್ವಾಧೀನಪಡಿಸಿಕೊಳ್ಳುವ ಉದ್ದೇಶ, ಇದರ ಸಂಪತ್ತನ್ನೂ ಜನಬಾಹುಳ್ಯವನ್ನೂ ತನ್ನ ವ್ಯಾಪಾರಕ್ಕಾಗಿ ಉಪಯೋಗಿಸಿಕೊಳ್ಳುವುದಕ್ಕೆ ಮಾತ್ರವೇ ಆಗಬಲ್ಲದು.

೪. ಭಾರತಕ್ಕೂ ಯುದ್ಧದ ಗೀಳು ಹತ್ತಿದರೂ (ಅ) ಈ ಸಂದರ್ಭದಲ್ಲಂತೂ ಪರಿಣಾಮಕಾರಿಯಾಗುವಂತೆ ಶಸ್ತ್ರಗ್ರಹಣ ಮಾಡಲು ಸಾಧ್ಯವಿಲ್ಲ ; (ಆ) ಮುಂದಾದರೂ ಪರದೇಶಗಳ ಧನಸಹಾಯ ನಿಪುಣಜನ ಸಹಾಯಗಳಿಂದಲ್ಲದೆ ಆಗಲಾರದು ; (ಇ) ಆ ಸಹಾಯ ಪಡೆಯಲು ಭಾರತ ಒಪ್ಪಿಕೊಳ್ಳಬೇಕಾದ ಕರಾರುಗಳು ಭಾರತವನ್ನು ನುಚ್ಚುನುರಿಯಾಗಿ ಮಾಡಿ, ಭಾರ ತದ ಸಂಪೂರ್ಣ ಸ್ವಾತಂತ್ರ್ಯವೆಂಬುದನ್ನು ಬರೀ ಗಾಳಿಮಾತಾಗಿ ಮಾಡೀಯಾವು.

ಇದರಿಂದ ತೇಲುವ ಸಿದ್ಧಾಂತ ಇವು :

(೧) ಇಷ್ಟಪಟ್ಟೋ ಇಷ್ಟವಿಲ್ಲದೆಯೋ ಶಸ್ತ್ರತ್ಯಾಗದ ದಾರಿ ಯಲ್ಲಿ ನಾವು ಬಲುದೂರ ಹೋಗಿದೇವೆ. ಈಗಲೂ ಅದೇ

ದಾರಿಯಲ್ಲೇ ನಾವು ಬಲಗೂಡಿಸಿಕೊಳ್ಳಬೇಕು ; ರೆಕ್ಕೆ ಬಲಿಸ ಬೇಕು. ಇಡೀ ಜಗತ್ತೇ ಯಾವ ದಾರಿ ಬಿಟ್ಟರೆ ಒಳಿತು ಎನ್ನುತ್ತೇವೋ, ಆ ದಾರಿಗೇ ಮತ್ತೆ ನಾವು ತಿರುಗುವುದು ಸರಿಯಲ್ಲ. ಇಷ್ಟು ವಿಸ್ತಾರ ದೇಶ, ಇಷ್ಟು ಕೋಟಿ ಜನ ಇರುವ ನಾವು, ಆ ಬಲದಿಂದಲೇ ಸಂಪೂರ್ಣ ಸ್ವತಂತ್ರರಾಗಿ ನಿರ್ಭಯವಾಗಿ ಬದುಕಲಾರದಿದ್ದರೆ ಶಸ್ತ್ರಸನ್ಯಾಸದ ಧ್ಯೇಯ ತಪ್ಪೆಂದೂ ವಿನಾಶ ಕಾರಿಯೆಂದೂ ಅದನ್ನು ಬಿಟ್ಟುಬಿಡಬೇಕು.

(೨) ನಮ್ಮ ಜನರೇ ಹೆಚ್ಚಾಗಿ ಶಸ್ತ್ರಸಹಾಯ ಮಾಡದೆ ಯಾವ ಪರದೇಶೀ ದಾಳಿಗಾರನೂ ನಮ್ಮ ದೇಶದ ಯಾವ ಭಾಗ ವನ್ನೂ ಬಹುಕಾಲ ಆಕ್ರಮಿಸಲಾರ. ಮೇಲೆ ಹೇಳಿದುದೇ ಕಾರಣ.

(೩) ನಮ್ಮ ಜನ ಆಡಳಿತದಲ್ಲಿ ನೆರವಾಗದೆ, ಅವರ ಪರ ವಾಗಿ ಇವರೇ ನಡಸದೆ, ಯಾವ ಪರದೇಶೀ ಪ್ರಭುತ್ವವೂ ಒಂದು ದಿನವಾದರೂ ಇಲ್ಲಿ ರಾಜ್ಯಮಾಡಲಾರದು.

(೪) ನಮ್ಮ ಜನರನ್ನು ಕೂಲಿಗಳಾಗಿ ದುಡಿಸದೆ ಯಾವ ಪರದೇಶೀ ಪ್ರಭುತ್ವವೂ ನಮ್ಮ ಪ್ರಕೃತಿ ಸಂಪತ್ತನ್ನು, ಎಷ್ಟೇ ಯಂತ್ರಬಲವಿದ್ದರೂ ತನ್ನ ಲಾಭಕ್ಕಾಗಿ ಉಪಯೋಗಿಸಲಾರದು.

ಆದುದರಿಂದ, ಹಿಂದುಸ್ಥಾನವು ಸಂಪೂರ್ಣವಾದ ಚುರು ಕಾದ ಅಸಹಕಾರವನ್ನು ಅವಲಂಬಿಸಿದರೆ ಯಾವ ಪರದೇಶೀ ಪ್ರಭುತ್ವವೂ ಅದನ್ನು ಆಳಲಾರದು ; ಹಿಂದುಸ್ಥಾನ ತನ್ನ ರಕ್ಷಣೆಗಾಗಿ ಒಂದು ಹುಲ್ಲುಕಡ್ಡಿಯನ್ನೂ ಮುಟ್ಟಬೇಕಾಗಿಲ್ಲ.

ಇದನ್ನು ಸಾಧಿಸಬಹುದೆ? ಎಷ್ಟುಮಟ್ಟಿಗೆ ಸಾಧ್ಯ ? ಈ ಪ್ರಶ್ನೆಗಳನ್ನು ಮುಂದೆ ಚರ್ಚಿಸುತ್ತೇನೆ. ಇಲ್ಲದಿದ್ದರೆ ಏನು,

ಎಂಬ ನಷ್ಟದ ಪಕ್ಷವನ್ನು ಇಲ್ಲಿ ವಿವರಿಸುತ್ತೇನೆ. ಸರಿಯಾಗಿ ಸಾಕಷ್ಟುಮಟ್ಟಿಗೆ ಅಹಿಂಸಾ ರೀತಿಯಲ್ಲಿ ನಾವು ಸಂಘಟಿತರಾಗ ದಿದ್ದರೆ, ಹಿಂಸಾರೀತಿಯಲ್ಲಿ ಸಂಘಟಿತರಾಗುವ ಪ್ರಯತ್ನ ಅತಿ ದುರ್ಬಲವಾಗಿ, ನಮಗೇ ಮುಳಿವು ತರುತ್ತದೆ. ಅಹಿಂಸೆಗಿಂತ ಹಿಂಸೆಗೇ ಹೆಚ್ಚು ಅಂತರ್‌ವ್ಯವಸ್ಥೆ ಬೇಕು. ಅದು ಅತ್ಯಗತ್ಯ. ಅಂಥ ಬಲವಾದ ವ್ಯವಸ್ಥೆಯಿಲ್ಲದಿದ್ದರೆ ಹಿಂಸೆ ಸೇನಾಯೋಜನೆ ಸ್ವೇಚ್ಛಾವಿಹಾರವಾಗಿ, ನಮ್ಮ ಸಾವಿರಾರು ವರ್ಷದ ಅನುಭವ ದಂತೆ, ದೇಶವನ್ನು ಹಲವು ಬಗೆಯ ಅಂತಃಕಲಹ ಅಶಾಂತಿಗಳಿಗೆ ಗುರಿಮಾಡಿ, ಪರದೇಶಗಳೊಡನೆ ಒಳಸಂಚುಗಳಿಗೆ ದಾರಿ ಮಾಡು ತ್ತದೆ; ನಮ್ಮ ಬಲ ಬೆಳೆಸದು, ಸ್ವಾತಂತ್ರ್ಯ ತಾರದು. ಡಾ. ಸುನ್‌ಯಾತ್‌ಸೇನ್ ಹೇಳಿದ ಮಾತಿರಬೇಕು: ಹೆಸರಿಗೆ ಸ್ವತಂತ್ರವಾದರೂ ಚೀನಾಕ್ಕೆ ಒಂದಲ್ಲ, ಹತ್ತು ಹಗೆ. ಭಾರತಕ್ಕೆ ಒಂದೇ ವಿದೇಶೀ ಸರಕಾರ ಹಗೆ. ಭಾರತದ್ದು ಅಷ್ಟೇ ಪುಣ್ಯ.

---

## ೭

## ದಾಳಿ, ಅವ್ಯವಸ್ಥೆ

ಹಿಂದುಸ್ಥಾನವನ್ನು ಶಾಶ್ವತವಾಗಿ ಗೆಲ್ಲುವುದು ಯಾವ ಪರದೇಶೀ ಪ್ರಭುತ್ವಕ್ಕೂ ಸಾಧ್ಯವಿಲ್ಲವೆಂದು ತೋರಿಸಲು ಇಲ್ಲಿಯತನಕ ಪ್ರಯತ್ನಿಸಿದೇನೆ. ಅದಕ್ಕೆ ದೃಢವಾದ ಅಹಿಂಸಾ ವ್ಯವಸ್ಥೆಯೇ ದಾರಿಯೆಂದೂ ತೋರಿಸಿದೇನೆ. ಅಹಿಂಸೆಗೇ ಅದು ಸಾಧ್ಯವಲ್ಲದಿದ್ದರೆ ಹಿಂಸೆಗೆ ಸಾಧ್ಯವಾಗುವ ಸಂಭವ ಇನ್ನೂ ಕಡಮೆ.

ಒಂದು ಪ್ರಶ್ನೆ ಕೇಳಬಹುದು. ಘಜನಿ ಮಹಮ್ಮದ್, ಅಹಮದ್‌ಷಹ ಅಬ್ದಾಲಿ, ಬಾಬರರ ದಾಳಿಗಳಂಥವನ್ನು ಸೂರತ್ತಿನ ಮೇಲೆ ಶಿವಾಜಿ, ದಿಲ್ಲಿಯಮೇಲೆ ನಾದಿರ್‌ಷಾ ಮಾಡಿದ ಮುತ್ತಿಗೆಯಂಥವನ್ನು ಅಹಿಂಸೆಯಿಂದ ತಡೆಗಟ್ಟಲು ಸಾಧ್ಯವೆ?. ಬೊಂಬಾಯಿ ಕಲ್ಕತ್ತೆ ದಿಲ್ಲಿಗಳಿಗೆ ನುಗ್ಗಿ, ನಾಲ್ಕುದಿನ ಆ ಊರನ್ನು ಹಿಡಿದು, ಅಲ್ಲಿನ ಕೋಟ್ಯಾಧೀಶರನ್ನು ಸುಲಿದು, ಊರನ್ನು ಲೂಟಿಮಾಡಿ ಹಾವಳಿಮಾಡದಂತೆ ದಾಳಿಗಾರನನ್ನು ತಡೆಯಲು ಸಾಧ್ಯವೇ ?

ಸಂಪೂರ್ಣ ಅಹಿಂಸೆ ತಡೆಗಟ್ಟಬಲ್ಲದು ಎಂದು ನನ್ನ ಉತ್ತರ. ಆದರೆ ನಾವೀಗ ವ್ಯಾವಹಾರಿಕ ಅಹಿಂಸೆಯನ್ನು ಯೋಚಿಸುತ್ತಿದೇವೆ. ಆದ್ದರಿಂದ, ಸಂಪೂರ್ಣವಾಗಿ ತಡೆಗಟ್ಟುವ ಸಂಭವ ಇದೆ ಎನ್ನುತ್ತೇನೆ. ಅದರಲ್ಲಿ ಶಿಸ್ತು, ಬಂಟತನ, ವ್ಯವಸ್ಥೆ ಇದ್ದರೆ-ಹಿಂಸೆಗಾದರೂ ಇವು ಅಗತ್ಯ ಯುದ್ಧದ ವಿನಾಶ ಗುಣವನ್ನು ಕಡಮೆಮಾಡುತ್ತವೆ. ಕೊಲೆ, ಪೀಡೆ, ಪುರದಹನ ಮುಂತಾದುವನ್ನು ಕಡಮೆಮಾಡಬಲ್ಲದು. ವೈರಿಗಳಲ್ಲಿ ಕೆಲವರಿಗಾದರೂ ಈ ಅಹಿಂಸೆ ನಾಚಿಕೆ ಹುಟ್ಟಿಸಿ ಪಶ್ಚಾತ್ತಾಪ ತಂದೀತು. ಇತಿಹಾಸದಲ್ಲಿ ಅಹಿಂಸಾ ಪರಾಕ್ರಮದ ಕೀರ್ತಿಯನ್ನು ಚಿರವಾಗಿ ಬೆಳಗೀತು. ಹಿಂಸೆಯಲ್ಲಾದರೂ ಸೋತವರಿಗೆ ಇದೇ ತಾನೆ ಸಮಾಧಾನ. ಹಿಂಸೆಯಲ್ಲಿ ಯಾವಾಗಲೂ ಅಲ್ಪ ಸ್ವಲ್ಪ ನೀತಿ ನಷ್ಟವಿದೆ. ಅಹಿಂಸಾ ಕಾರ್ಯದಲ್ಲಿ ಇಲ್ಲ. ಸ್ವಲ್ಪವೂ ಪದಾರ್ಥ ನಷ್ಟವಾಗದಿರುವುದೇ ಗೆಲವು ಎಂದರೆ, ಹಿಂಸೆಯೇನು ಅಹಿಂಸೆಯೇನು ಯಾವುದರಲ್ಲೂ ಅದು ಸಾಧ್ಯವಿಲ್ಲ. ಹಿಂಸಾಯುದ್ಧದಲ್ಲಿ ಯಾರೂ ಇಂಥ ಒರೆಗಲ್ಲು ಕೊಡುವುದಿಲ್ಲ. ಅಹಿಂಸೆಯಲ್ಲಿ

ಮಾತ್ರ ಇದೇಕೆ? ಇದು ತಪ್ಪು. **ಪ್ರತಿಹಿಂಸೆಯ ನಿರೋಧಕ್ಕಿಂತ ಅಹಿಂಸಾ ನಿರೋಧದಲ್ಲಿ 'ಸೋಲಲಿ ಗೆಲ್ಲಲಿ' ಪ್ರಾಣನಾಶ, ಪದಾರ್ಥನಾಶ ಕಡಮೆ. ಇದನ್ನು ದೃಢವಾಗಿ ಹೇಳಬಹುದು.**

ಹೊರಗಿನವರ ದಾಳಿಗೆ ಮುತ್ತಿಗೆಗೆ ಇದಿರಾಗಿ ಒಡ್ಡುವ ಅಹಿಂಸಾ ನಿರೋಧವೆ ದರೋಡೆಗಾರರ, ನೆರೆಯ ಹೊರೆಯವರ ದೌರ್ಜನ್ಯಕ್ಕೂ ಸಲ್ಲುತ್ತದೆ. ನೋಡಲಿಕ್ಕೆ ಆಭಾಸವಾಗಿ ಕಂಡರೂ ಒಳದೇಶದ ಹಗೆಗಿಂತ ಹೊರಗಿನ ಹಗೆಯನ್ನು ನಿಗ್ರಹಿಸುವುದು ಸುಲಭವೆಂಬುದು ಸತ್ಯ. ಒಳನಾಡಿನ ಮುತ್ತಿಗೆಯೂ ಯುದ್ಧದ ರೀತಿಯಲ್ಲೇ ನಡೆದೀತು. ಆದರೂ ಅವು ಒಳಜಗಳ, ಕಾನೂನೀ ತಪ್ಪು. ಅವು ಯಾವಾಗ ನಡೆದಾವೋ ಹೇಗೆ ನಡೆದಾವೋ ಹೇಳುವಂತಿಲ್ಲ. ಅದಕ್ಕೆ ಮೊದಲು ಮುನ್ಸೂಚನೆ, ಕೊನೆಮಾತೂ ಇಲ್ಲ. ಅದರಲ್ಲಿ ಪಾಲುಗಾರರೆಲ್ಲ ನಮ್ಮವರೇ. ಅದರರ್ಥ: ದೇಶದಲ್ಲಿ ಎಲ್ಲವೂ ಸುರಕ್ಷಿತವಲ್ಲ: ಲಂಗು ಲಗಾಮಿಲ್ಲದ ಸ್ವಾರ್ಥವೋ ದಟ್ಟದಾರಿದ್ರ್ಯವೋ ದುರ್ಭರ ದುಃಖವೋ ಏನೋ ಒಂದು ಆವರಿಸಿದೆ ಎಂದು.

ದೊರೆಗಳ ದೌರ್ಜನ್ಯ ಕುರಿತ ಚರ್ಚೆ ಈಗ ಅನಗತ್ಯ. ಅಂಥ ಸಂದರ್ಭ ಬಂದರೆ ಪರಕೀಯ ದಾಳಿಗಾರನ ಇದಿರು ಹೂಡುವ ಅಹಿಂಸಾ ವಿಧಾನವೇ ಇದಕ್ಕೂ ಸರಿ. ಜೊತೆಗೆ–ಸಂಸ್ಥಾನೀ ಪ್ರಜೆ ಪ್ರಜಾಸತ್ತೆಗಾಗಿ ಅನುಸರಿಸುವ ವಿಧಾನ.

ದರೋಡೆಗಾರರ, ಕಳ್ಳಕಾಕರರ ಮಾತು ಬೇರೆ. ಅದಕ್ಕೆ ಉಪಾಯವೂ ' ಬೇರೆ. ಸಾಧಾರಣವಾಗಿ ನಮ್ಮ ಕೊತ್ವಾಲಿ

ಪದ್ಧತಿ ಬಲವಾದರೆ ಸಾಕು. ಸಾಮಾನ್ಯ ಕಳ್ಳತನಗಳಿಗೆ ಅಷ್ಟೇ ಸಾಕು ಮದ್ದು. ಆಯುಧಪಾಣಿಗಳಾದ ಕಳ್ಳರ ಗುಂಪಿಗೆ ಆ ಉಪಾಯ ಸಾಲದು. ವ್ಯಾವಹಾರಿಕ ಅಹಿಂಸೆಯಲ್ಲಿ ಪೋಲೀಸು ಶಾಖೆ ಇರಬಾರದೆಂದಾಗಲಿ, ಅವರಿಗೆ ಮಾಮೂಲು ಆಯುಧಗಳನ್ನು ಕೊಡಬಾರದೆಂದಾಗಲಿ ಇಲ್ಲ. ಆದರೆ ಪೋಲೀಸರ ಕೆಲಸದ ಜೊತೆಗೆ ಮತ್ತೊಂದುಬಗೆಯ ಕೆಲಸ ನಡೆಯಬೇಕು. ಪೋಲೀಸರ ಕೆಲಸ, ತಪ್ಪುನಡೆಯದಂತೆ ಮಾಡುವುದು. ಈಗ ತಪ್ಪುಗಾರರನ್ನು ಕಾವಲು ಕಾಯುವುದು, ತಪ್ಪು ನಡೆದಮೇಲೆ ಅದನ್ನು ಪತ್ತೆಮಾಡಿ ತಪ್ಪುಗಾರರನ್ನು ಹಿಡಿಯುವುದು ಆಗಿದೆ. ತಪ್ಪುನಡೆಯದಂತೆ ತಡೆಯಲು ಅವರಿಗೆ ಸಾಧ್ಯವಾಗಿಲ್ಲ. ತಪ್ಪು ನಡೆಯಲು ಕಾರಣವೇನೆಂದು ಪರಿಶೀಲಿಸಿ ಅದನ್ನು ನಿವಾರಿಸಬೇಕು. ಏನು ಕಾರಣ? ಅನ್ನೋದಕದ ಅಭಾವವೆ? ನ್ಯಾಯಮಾರ್ಗದಲ್ಲಿ ತನ್ನ ಸಾಮರ್ಥ್ಯ ತೋರಲು ಅವಕಾಶ ಲೋಪವೆ? ಪ್ರತೀಕಾರ ಬುದ್ಧಿಯೆ? ನಿಜವಾಗಲಿ ಕಲ್ಪನೆಯಾಗಲಿ, ಯಾವುದೋ ಅನ್ಯಾಯ ಪರಿಹಾರವಾಗಲಿಲ್ಲವೆಂಬ ಸಂಕಟವೆ? ಧಾರ್ಮಿಕ ಕಲಹವೆ? ಜಾತಿಗಳ ಜಗಳವೆ? ಇವು ಯಾವುದೂ ಸಾಧಾರಣ ಪೋಲೀಸನ ಕಾರ್ಯಕ್ರಮದಲ್ಲಿಲ್ಲ ರಚನಾ ಕಾರ್ಯಕ್ರಮದ ಪಟ್ಟಿಯಲ್ಲಿವೆ. ನಮ್ಮಲ್ಲಿ ಅಧಿಕಾರ ರೀತ್ಯಾ ಆಗಲಿ ಅನಧಿಕಾರರೀತ್ಯಾ ಆಗಲಿ ಈ ಕಾರ್ಯಕ್ರಮದ ಬಗ್ಗೆ ಸಾಕಷ್ಟು ಗಮನಕೊಟ್ಟಿಲ್ಲ. ಆದ್ದರಿಂದ ಅಶಾಂತಿಯ ಕಾಲದಲ್ಲಿ ಕೊಂಚ ಕಷ್ಟನಷ್ಟವಾಗೇ ಆಗುತ್ತದೆ. ತಮ್ಮ ಕ್ಷೇಮಕ್ಕಾಗಿ ವಿಧಿಯಿಲ್ಲದೆ ಶ್ರೀಮಂತರಾದವರು ಪಠಾಣರಿಗೆ, ಭಯ್ಯಾಗಳಿಗೆ ಹಣ ಸುರಿವ ಬದಲು ಈ ನಿರ್ಮಾಣ ಕಾರ್ಯಕ್ರಮಕ್ಕೆ ಉದಾರವಾಗಿ ಸಹಾಯಮಾಡಿದರೆ, ತಮ್ಮ ಸಾಲಗಾರರನ್ನು

ಕೂಲಿಗಾರರನ್ನು ಕೆಲಸಗಾರರನ್ನು ಧಾರಾಳ ಬುದ್ಧಿಯಿಂದ ನಡಸಿಕೊಂಡರೆ, ಬಾಳಿನಲ್ಲಿ ಕೊಂಚ ಭ್ರಾತೃಭಾವ ಬೆಳಸಿದರೆ, ಆ ನಷ್ಟಕಷ್ಟ ಕೆಲಮಟ್ಟಿಗೆ ಕಡಮೆಯಾದೀತು. ಒಳ್ಳೇತನದಿಂದ ಮರುಗಳಿಗೆಯಲ್ಲಿ ಒಳ್ಳೇತನ ಮೊಳೆತು ಬರಲಿಕ್ಕಿಲ್ಲ. ಅದರಲ್ಲೂ ಭಯದಿಂದ, ಪ್ರತಿಫಲದ ಲೆಕ್ಕಾಚಾರದಿಂದ ಮಾಡಿದ ಒಳ್ಳೇತನಕ್ಕಂತೂ ಸದ್ಯಃ ಫಲವಿಲ್ಲ. ಒಂದುವೇಳೆ ದೌರ್ಜನ್ಯ ಪುಂಡುತನಕ್ಕೂ ದಾರಿ ಕೊಡಬಹುದು. ಆದರೆ ಅದು ಬಹುಕಾಲ ಬಾಳದು. ಒಳ್ಳೇ ನಡತೆಯಿಂದ ಒಳ್ಳೇ ಫಲ, ಸಮರಸದ ಸಂಬಂಧ ಬರಲೇಬೇಕು. ವೈರಿಯಿರಲಿ ಸ್ವಕೀಯನಿರಲಿ, ಉದಾರತನದಿಂದ ನಡೆಯುವ ನಿಯಮ ಬೇಕು. ವ್ಯಾವಹಾರಿಕ ಅಹಿಂಸೆಯ ಎಲ್ಲ ಸಂಸ್ಥೆಗಳಿಗೂ ಇದು ಅನಿವಾರ್ಯಸೂತ್ರ.

---

## ೮
## ಅಹಿಂಸಾ ಸಂಘಟನೆ

ಅಹಿಂಸಾ ಸಂಘಟನೆಮಾಡಲು ಇರುವ ಅನುಕೂಲವೇನು, ಕಷ್ಟವೇನು, ವಿಚಾರಮಾಡೋಣ.

ನಮಗೆ ಅತ್ಯಂತ ಅನುಕೂಲವಾದ ಅಂಶ—ಸಾವಿರಾರು ವರ್ಷದಿಂದ ಅಸಹಕಾರದ ಸಂಘಟನೆಗೆ ನಮ್ಮ ಸ್ವಭಾವ ಗುಣ ಒಗ್ಗಿವೆ. ಆ ವಿಷಯದಲ್ಲಿ ನಮಗೆ ನಂಬಿಗೆಯಿದೆ, ಧೈರ್ಯವಿದೆ. ಅಸಹಕಾರ ಶಸ್ತ್ರವನ್ನು, ಏಟುಹಾಕಲೂ ತಡೆಯಲೂ ಎರಡಕ್ಕೂ ನಾವು ಪ್ರಯೋಗಿಸಿದ್ದೇವೆ. ಸತ್ಯಾಗ್ರಹ ಬುದ್ಧಿಯಿಂದ, ಪ್ರತೀ

ಇಸ್ಲಾಮ್ ಮತಕ್ಕೆ ಸೇರಿದರಾಗಲಿ, ಕ್ರಿಸ್ತಾನಮತ, ಸಿಖ್ ಸಂಘಕ್ಕೆ ಹೋದರಾಗಲಿ ಈ ಪ್ರತಿಭೆ ಅಳಿಯದು. ಹರಿಜನರಲ್ಲೂ ವಿಶೇಷವಾಗಿ ಇದೆ.

ಈಗಿನ ನಮ್ಮ ಪರಿಸ್ಥಿತಿಗೆ ಅನುಸಾರವಾಗಿ ಆ ಅಸ್ತ್ರವನ್ನು ಹೊಸ ಮೂಸೆಯಲ್ಲಿ ಎರಕಹೊಯ್ಯಬೇಕಾದೀತು. ನಮ್ಮ ಅಹಿಂಸಾ ವಿಚಾರ ಬೆಳೆದಿರುವುದರಿಂದ ಅದಕ್ಕೆ ತಕ್ಕಂತೆ ಸಾಣೆ ಹಿಡಿಯಲೂಬೇಕು. ನಾನು ಒತ್ತಿಹೇಳಬಯಸುವುದಿಷ್ಟೆ: ಈ ಶಸ್ತ್ರ ನಮ್ಮದು; ನಮಗೆ ಪೂರ್ಣ ಪರಿಚಿತವಾದುದು; ಅದನ್ನು ಬಳಸುವ ವಿಧಾನದ ತಿಳಿವು ನಮಗೆ ರಕ್ತಗತವಾಗಿ ಬಂದಿದೆ. ಈಗ ಇನ್ನೇನೂ ಮಾಡಬೇಕಾಗಿಲ್ಲ. ಅದರ ಸಂಸ್ಕರಿತ ಆವೃತ್ತಿಯ ಧರ್ಮಸೂತ್ರಗಳನ್ನೂ ವಿಧಿನಿಷೇಧಗಳ ಮೂಲ ಲಕ್ಷಣವನ್ನೂ ಹೇಳಿದರಾಯಿತು. ಆಯಾ ಸ್ಥಾನಬಲ ದೌರ್ಬಲ್ಯಕ್ಕೆ ತಕ್ಕಂತೆ ಉಳಿದ ಗೆರೆಗಳನ್ನೆಲ್ಲ ಜನರೇ ಎಳೆದುಕೊಳ್ಳಬಲ್ಲರು.

ನಮಗೆ ಅನುಕೂಲವಾದ ಮತ್ತೊಂದು ಮುಖ್ಯ ಸಂಗತಿ— ನಮ್ಮ ದೇಶ ಬಂಜೆಯಾದ ಮರಳುಗಾಡಲ್ಲ. ಪರಕೀಯರ ನೆರವಿಲ್ಲದೆ ನಾವು ಬಾಳಲು ಅಸಾಧ್ಯ ಎಂಬಂತಿಲ್ಲ. ನವನಾಗರಿಕತೆಯ ಭೋಗವಿಲಾಸದ ಸೌಕರ್ಯಗಳಿಲ್ಲದಿರಬಹುದು. ಆದರೆ ಸುಖಜೀವನಕ್ಕೆ ಕೊರತೆಯಿಲ್ಲ. ನಮಗೂ ಪ್ರಕೃತಿ ಸಂಪತ್ತಿದೆ, ಜನಬಲವಿದೆ, ರಚನಾಕೌಶಲವಿದೆ. ಅಮೆರಿಕದಂತೆ, ಯೂರೋಪಿನಂತೆ ವೇಗವಾಗಿ ಕಟ್ಟಲಾರದಿದ್ದರೂ ನಿಧಾನವಾಗಿ, ಭದ್ರವಾಗಿ ನಾವೂ ನಮ್ಮ ದೇಶವನ್ನು ಕಟ್ಟಬಲ್ಲೆವು ಇಷ್ಟೇ ಅಲ್ಲ, ಹಿಂದೆ ಮಾಡಿದಂತೆ, ತಮ್ಮ ದೇಶವನ್ನು ಸರಿಯಾಗಿ ಪುನ

ನಿರ್ವಾಣ ಮಾಡಿಕೊಳ್ಳಲು ಬಯಸುವ ಇತರ ದೇಶಗಳಿಗೂ ನೆರವಾದೇವು. ಗೆಳೆಯರಂತೆ, ಸಮಾನಸ್ಕಂಧರಂತೆ ಅವರು ನಮ್ಮ ಸಹಕಾರ ಬಯಸಿ ಬರಬೇಕು. ನಮ್ಮನ್ನೇ ಬೆದರಿಸುವ ಗುಮ್ಮನಾಗಿ ಅಲ್ಲ. ಪರಸ್ಪರ ಶ್ರೇಯೋಭಿವೃದ್ಧಿಗಾಗಿ ಆ ಸಹ ಕಾರ ಬಯಸಬೇಕು; ಶೋಷಣೆಗಾಗಿ ಅಲ್ಲ. ಅಹಿಂಸಾತ್ಮಕ ಅಸಹಕಾರವೆಂದರೆ ಎಲ್ಲರನ್ನೂ ಬಿಟ್ಟು ಒಂಟಿಯಾಗಿರುವುದಲ್ಲ. ಗೌರವಯುತವಾದ ಮೈತ್ರಿ; ಸೋತು, ಸೋಲೊಪ್ಪಿಕೊಂಡು ಗೆದ್ದವನ ಪಾದಧೂಳಿಯಾಗಿ ಹೋಗುವುದು ಅಹಿಂಸಾತ್ಮಕ ಅಸಹಕಾರಕ್ಕೆ ಒಪ್ಪಿಗೆಯಿಲ್ಲ. ಸ್ವಪರಿಪೂರ್ಣತೆಯ ಸ್ವಾವ ಲಂಬನ ಕಾರ್ಯನೀತಿ ಗಡುಸಲ್ಲ, ಉದಾರತನವಿಲ್ಲದ್ದಲ್ಲ. ಅದೊಂದು ದುರ್ಗಮವಾದ ಕೋಟೆ. ಸಂದರ್ಭಾನುಸಾರ ಮಹಾದ್ವಾರವನ್ನು ತೆರೆಯಲೂಬಹುದು, ಮುಚ್ಚಲೂಬಹುದು.

ಸಾಧಾರಣವಾಗಿ ಎತ್ತಿನಗಾಡಿ ಕುದುರೆಗಾಡಿ ಪ್ರಯಾಣ ಮಾಡಲು, ಒಲೆಯಮೇಲೆ ಗುಂಡುಗಳಮೇಲೆ ಕಾಸಿದ ನೀರಿನಿಂದ ತಡಿಕೆ ಮರೆಯಲ್ಲೋ ಚಿಕ್ಕ ಬಚ್ಚಲಲ್ಲೋ ಸ್ನಾನಮಾಡಲು, ದಿನಕ್ಕೊಂದುಸಲ ಸುದ್ದಿ ತಿಳಿದರೆ ಸಾಕು ಎನ್ನಲು, ನಮಗೆ ಒಪ್ಪಿಗೆಯಾದರೆ ಸ್ವಸಹಾಯದಿಂದಲೇ ನಮ್ಮ ದೇಶವನ್ನು ನಾವು ಕಟ್ಟಿಕೊಳ್ಳಬಹುದು. ಹಾಗಲ್ಲದೆ ವಿಜ್ಞಾನದ ನಾಗರಿಕತೆ ಬೇಗ ಬೇಗ ಆಮದಾಗಿ ಬರಲಿ ಎಂದರೆ ನೂರಾರುಬಗೆಯ ತೊಡಕು ಗಳನ್ನು ಬಿಡಿಸಲೇಬೇಕಾದೀತು. ಯುಗಯುಗದಿಂದ ಅಹಿಂ ಸೆಯ ಸಂಸ್ಕೃತಿಯ ಬಲದಿಂದ ಕಟ್ಟಿದ ಈ ಸಮಾಜವನ್ನು ಅಹಿಂಸಾಮಾರ್ಗದಿಂದಲೇ ಮತ್ತೆ ಕಟ್ಟಬೇಕಾದ ಪ್ರಶ್ನೆಯಂತೂ ಇದ್ದೇ ಇದೆ.

ಇಸ್ಲಾಮ್ ಮತಕ್ಕೆ ಸೇರಿದರಾಗಲಿ, ಕ್ರಿಸ್ತಾನಮತ, ಸಿಖ್ ಸಂಘಕ್ಕೆ ಹೋದರಾಗಲಿ ಈ ಪ್ರತಿಭೆ ಅಳಿಯದು. ಹರಿಜನ ರಲ್ಲೂ ವಿಶೇಷವಾಗಿ ಇದೆ.

ಈಗಿನ ನಮ್ಮ ಪರಿಸ್ಥಿತಿಗೆ ಅನುಸಾರವಾಗಿ ಆ ಅಸ್ತ್ರವನ್ನು ಹೊಸ ಮೂಸೆಯಲ್ಲಿ ಎರಕಹೊಯ್ಯಬೇಕಾದೀತು. ನಮ್ಮ ಅಹಿಂಸಾ ವಿಚಾರ ಬೆಳೆದಿರುವುದರಿಂದ ಅದಕ್ಕೆ ತಕ್ಕಂತೆ ಸಾಣೆ ಹಿಡಿಯಲೂಬೇಕು. ನಾನು ಒತ್ತಿಹೇಳಬಯಸುವುದಿಷ್ಟೆ: ಈ ಶಸ್ತ್ರ ನಮ್ಮದು; ನಮಗೆ ಪೂರ್ಣ ಪರಿಚಿತವಾದುದು; ಅದನ್ನು ಬಳಸುವ ವಿಧಾನದ ತಿಳಿವು ನಮಗೆ ರಕ್ತಗತವಾಗಿ ಬಂದಿದೆ. ಈಗ ಇನ್ನೇನೂ ಮಾಡಬೇಕಾಗಿಲ್ಲ. ಅದರ ಸಂಸ್ಕರಿತ ಆವೃತ್ತಿಯ ಧರ್ಮಸೂತ್ರಗಳನ್ನೂ ವಿಧಿನಿಷೇಧಗಳ ಮೂಲ ಲಕ್ಷಣವನ್ನೂ ಹೇಳಿದರಾಯಿತು. ಆಯಾ ಸ್ಥಾನಬಲ ದೌರ್ಬ ಲ್ಯಕ್ಕೆ ತಕ್ಕಂತೆ ಉಳಿದ ಗೆರೆಗಳನ್ನೆಲ್ಲ ಜನರೇ ಎಳೆದುಕೊಳ್ಳ ಬಲ್ಲರು.

ನಮಗೆ ಅನುಕೂಲವಾದ ಮತ್ತೊಂದು ಮುಖ್ಯ ಸಂಗತಿ— ನಮ್ಮ ದೇಶ ಬಂಜೆಯಾದ ಮರಳುಗಾಡಲ್ಲ. ಪರಕೀಯರ ನೆರ ವಿಲ್ಲದೆ ನಾವು ಬಾಳಲು ಅಸಾಧ್ಯ ಎಂಬಂತಿಲ್ಲ. ನವನಾಗರಿ ಕತೆಯ ಭೋಗವಿಲಾಸದ ಸೌಕರ್ಯಗಳಿಲ್ಲದಿರಬಹುದು. ಆದರೆ ಸುಖಜೀವನಕ್ಕೆ ಕೊರತೆಯಿಲ್ಲ. ನಮಗೂ ಪ್ರಕೃತಿ ಸಂಪತ್ತಿದೆ, ಜನಬಲವಿದೆ, ರಚನಾಕೌಶಲವಿದೆ. ಅಮೆರಿಕದಂತೆ, ಯೂರೋ ಪಿನಂತೆ ವೇಗವಾಗಿ ಕಟ್ಟಲಾರದಿದ್ದರೂ ನಿಧಾನವಾಗಿ, ಭದ್ರ ವಾಗಿ ನಾವೂ ನಮ್ಮ ದೇಶವನ್ನು ಕಟ್ಟಬಲ್ಲೆವು ಇಷ್ಟೇ ಅಲ್ಲ, ಹಿಂದೆ ಮಾಡಿದಂತೆ, ತಮ್ಮ ದೇಶವನ್ನು ಸರಿಯಾಗಿ ಪುನ

ನಿರ್ಮಾಣ ಮಾಡಿಕೊಳ್ಳಲು ಬಯಸುವ ಇತರ ದೇಶಗಳಿಗೂ ನೆರವಾದೇವು. ಗೆಳೆಯರಂತೆ, ಸಮಾನಸ್ಕಂಧರಂತೆ ಅವರು ನಮ್ಮ ಸಹಕಾರ ಬಯಸಿ ಬರಬೇಕು. ನಮ್ಮನ್ನೇ ಬೆದರಿಸುವ ಗುಮ್ಮನಾಗಿ ಅಲ್ಲ. ಪರಸ್ಪರ ಶ್ರೇಯೋಭಿವೃದ್ಧಿಗಾಗಿ ಆ ಸಹಕಾರ ಬಯಸಬೇಕು; ಶೋಷಣೆಗಾಗಿ ಅಲ್ಲ. ಅಹಿಂಸಾತ್ಮಕ ಅಸಹಕಾರವೆಂದರೆ ಎಲ್ಲರನ್ನೂ ಬಿಟ್ಟು ಒಂಟಿಯಾಗಿರುವುದಲ್ಲ. ಗೌರವಯುತವಾದ ಮೈತ್ರಿ; ಸೋತು, ಸೋಲೊಪ್ಪಿಕೊಂಡು ಗೆದ್ದವನ ಪಾದಧೂಳಿಯಾಗಿ ಹೋಗುವುದು ಅಹಿಂಸಾತ್ಮಕ ಅಸಹಕಾರಕ್ಕೆ ಒಪ್ಪಿಗೆಯಿಲ್ಲ. ಸ್ವಪರಿಪೂರ್ಣತೆಯ ಸ್ವಾವಲಂಬನ ಕಾರ್ಯನೀತಿ ಗಡುಸಲ್ಲ, ಉದಾರತನವಿಲ್ಲದ್ದಲ್ಲ. ಅದೊಂದು ದುರ್ಗಮವಾದ ಕೋಟೆ. ಸಂದರ್ಭಾನುಸಾರ ಮಹಾದ್ವಾರವನ್ನು ತೆರೆಯಲೂಬಹುದು, ಮುಚ್ಚಲೂಬಹುದು.

ಸಾಧಾರಣವಾಗಿ ಎತ್ತಿನಗಾಡಿ ಕುದುರೆಗಾಡಿ ಪ್ರಯಾಣ ಮಾಡಲು, ಒಲೆಯಮೇಲೆ ಗುಂಡುಗಳಮೇಲೆ ಕಾಸಿದ ನೀರಿನಿಂದ ತಡಿಕೆ ಮರೆಯಲ್ಲೋ ಚಿಕ್ಕ ಬಚ್ಚಲಲ್ಲೋ ಸ್ನಾನಮಾಡಲು, ದಿನಕ್ಕೊಂದುಸಲ ಸುದ್ದಿ ತಿಳಿದರೆ ಸಾಕು ಎನ್ನಲು, ನಮಗೆ ಒಪ್ಪಿಗೆಯಾದರೆ ಸ್ವಸಹಾಯದಿಂದಲೇ ನಮ್ಮ ದೇಶವನ್ನು ನಾವು ಕಟ್ಟಿಕೊಳ್ಳಬಹುದು. ಹಾಗಲ್ಲದೆ ವಿಜ್ಞಾನದ ನಾಗರಿಕತೆ ಬೇಗ ಬೇಗ ಆಮದಾಗಿ ಬರಲಿ ಎಂದರೆ ನೂರಾರುಬಗೆಯ ತೊಡಕುಗಳನ್ನು ಬಿಡಿಸಲೇಬೇಕಾದೀತು. ಯುಗಯುಗದಿಂದ ಅಹಿಂಸೆಯ ಸಂಸ್ಕೃತಿಯ ಬಲದಿಂದ ಕಟ್ಟಿದ ಈ ಸಮಾಜವನ್ನು ಅಹಿಂಸಾಮಾರ್ಗದಿಂದಲೇ ಮತ್ತೆ ಕಟ್ಟಬೇಕಾದ ಪ್ರಶ್ನೆಯಂತೂ ಇದ್ದೇ ಇದೆ.

ಯಾರೂ ತಪ್ಪು ತಿಳಿಯದಿರಲಿ. ಆಧುನಿಕವಿಜ್ಞಾನ ನಮ್ಮ ದೇಶಕ್ಕೆ ಬಾರದಂತೆ ಬೇಲಿ ಕಟ್ಟಬೇಕೆಂದು ನನ್ನ ಉದ್ದೇಶವಲ್ಲ. ಅದರಿಂದ ಆಗಬಹುದಾದ ಪ್ರಕೃತಿಸಂಪದುಪಯೋಗ, ಪದಾರ್ಥ ನಿರ್ಮಾಣಾದಿಗಳನ್ನೂ ಬೇಡವೆನ್ನುವುದಿಲ್ಲ. ನಾನು ಹೇಳುವ ದಿಷ್ಟೆ. ಪ್ರಕೃತಿವಿಜ್ಞಾನ, ಯಂತ್ರಶಾಸ್ತ್ರ ಸೂಚಿಸುವ ಎಲ್ಲ ಲಘು ವಿಧಾನವನ್ನೂ, ದುಡಿತ ಕಡಮೆಮಾಡುವ ಉಪಾಯವನ್ನೂ ಅವಸರ ಅವಸರವಾಗಿ ದೇಶದಲ್ಲಿ ಪ್ರಾರಂಭಿಸುವುದು ಬೇಡ. ಪ್ರತಿಯೊಂದು ಹೊಸ ವಿಧಾನದ ಪರಿಣಾಮವನ್ನೂ ನಿಧಾನ ವಾಗಿ ಪರೀಕ್ಷಿಸೋಣ· ಅದರಿಂದ ಸಮಾಜಕ್ಕೆ ಹಿತವಾಯಿ ತೆಂದು ನಿರ್ಧರಿಸಿಕೊಳ್ಳೋಣ. ಅದರಿಂದ ಸಮಾಜದಲ್ಲಿ ಆಗುವ ವ್ಯತ್ಯಾಸಗಳನ್ನು ಸರಿಪಡಿಸಿಕೊಳ್ಳೋಣ· ತರುವಾಯ ಇನ್ನೊಂ ದನ್ನು ಪ್ರಯೋಗಮಾಡೋಣ. ವಿಜ್ಞಾನದ ದಾರಿಯಲ್ಲಿ ಪಾಶ್ಚಾತ್ಯದೇಶಗಳು ಓಡಿದ ರಭಸಕ್ಕೆ ಗುರಿಯನ್ನು ಮುಟ್ಟುವ ಮೊದಲೇ ಆ ದೇಶಗಳು ದಿವಾಳಿಯಾಗುತ್ತಿವೆ. ಇದಕ್ಕಾಗಿ ತಮ್ಮ ವ್ಯವಹಾರವನ್ನು ಸಿಕ್ಕು ಮಾಡಿಕೊಂಡು ಒಬ್ಬರಿಗೊಬ್ಬರು ಜೋತುಬಿದ್ದಿದಾರೆ. ಅದರಲ್ಲಿ ಯಾರು ಯಾರಿಗೆ ಯಜಮಾ ನರೋ ತಿಳಿಯದಂತಿದೆ. ಆ ತೊಡಕಿನ ಕೀಲು ಯಂತ್ರದಲ್ಲಿ ಸಿಕ್ಕಿಹಾಕಿಕೊಳ್ಳುವ ಅಗತ್ಯ ನಮಗಿಲ್ಲ. ಅವರ 'ಪ್ರಗತಿಪರ ನಾಗರಿಕತೆ' ಯ ಮಬ್ಬು ಇಳಿವತನಕ ನಾವು ಹೊರಗೇ ಇರೋಣ. ಇವರು ಇನ್ನೂ ಓಬೀರಾಯನ ಕಾಲದವರು ಎಂದು ನಮ್ಮನ್ನು ಹಳಿದರೆ ಹಳಿಯಲಿ. ನಮ್ಮ ದೇಶದ ಜನಕ್ಕೆಲ್ಲರಿಗೆ ಕೊಟ್ಟ ಕೊನೆಯ ವ್ಯಕ್ತಿಗೆ ಕೂಡ, ಸಾಕಷ್ಟು ಅನ್ನಬಟ್ಟೆ, ಮನೆ ಮಾರು ಕೊಟ್ಟು ಆರೋಗ್ಯವಾಗಿ ದೃಢವಾಗಿ ಬಾಳಿ ಬದುಕು

ವಂತೆ ಮಾಡಿದರೆ ಸಾಕು. ಅತಿ ವೇಗ, ಅತಿ ಭೋಗಗಳ ಆಧುನಿಕ ವಿಜ್ಞಾನದ ಹಿಂಸಾಮಯ ಜೀವನದ ಕಗ್ಗಂಟಿನ ಬದುಕು ಬೇಡ.

---

೯

# ಕಷ್ಟ - ಕಠಿನತೆ

ಹಿಂದೆ ಹೇಳಿದ ಅನುಕೂಲಗಳಿಗೆ ಪ್ರತಿಯಾಗಿ ಕೆಲವು ಕಷ್ಟಗಳೂ ಇವೆ.

ಇಷ್ಟು ಜನಬಲ ಇದ್ದಾಗ ಕೆಲವು ಅನನುಕೂಲಗಳೂ ಇರುತ್ತವೆ. ಹಿಟ್ಲರ್ ಗೆದ್ದ ಚಿಕ್ಕದಾದ ಉತ್ತಮ ನಾಗರಿಕ ರಾಜ್ಯಗಳಲ್ಲೂ ಕೂಡ ಮಾತೃಭೂಮಿಗೆ ದ್ರೋಹಿಗಳು ಇಲ್ಲದಿರಲಿಲ್ಲವೆಂದು ಪತ್ರಿಕೆಗಳಿಂದ ನಮಗೆ ತಿಳಿದಿದೆ. ಹೊಟ್ಟೆಗಿಲ್ಲದ ನಿರುದ್ಯೋಗಿಗಳಲ್ಲಿ ಕೀಳರಲ್ಲಿ ಮಾತ್ರ ದ್ರೋಹಬುದ್ಧಿ ಕಾಣುತ್ತದೆಂದು ಕೆಲವರು ತಿಳಿಯುತ್ತಾರೆ. ಏನು ದುರಾದೃಷ್ಟವೋ ದ್ರೋಹಬುದ್ಧಿ ಸಾಧಾರಣವಾಗಿ ಮೇಲಂತಸ್ತಿನ ಜನರಲ್ಲಿ ಕಾಣುವುದೇ ಹೆಚ್ಚು. ನಮ್ಮದು ಒಲು ದೊಡ್ಡ ದೇಶ ; ಗುರಿ ಗಮನಗಳಲ್ಲಿ ಎಷ್ಟೋ ಅಭಿಪ್ರಾಯ ಭೇದ ; ಲೆಕ್ಕವಿಲ್ಲದ ಪರಸ್ಪರ ಅವಿಶ್ವಾಸ ; ಅಪಾರವಾದ ಅಧಿಕಾರಲಾಲಸೆ ; ಇಂಥ ಪರಿಸ್ಥಿತಿಯಲ್ಲಿ ಅಹಿಂಸಾಸಂಘಟನೆ ಸುಲಭಸಾಧ್ಯವಲ್ಲ ; ನಿರಾತಂಕವೂ ಅಲ್ಲ. ಇವರೆಲ್ಲರೂ ಹಿಂಸಾಭಕ್ತರ ಗುಂಪಿಗೆ ಸೇರಿದವರೇ ; ಅಹಿಂಸಾ ವ್ಯವಸ್ಥಾಪಕರ ಯತ್ನವನ್ನು ಮುರಿವುದು ಅವರ ಕೆಲಸ.

ಇವರಿಗಿಂತಲೂ ಹೆಚ್ಚು ತೊಡಕಿನ ಜನ, ಸ್ವತಃ ಶಸ್ತ್ರ ಧರಿಸ ದಿದ್ದರೂ ತಮ್ಮ ಲಾಭಕ್ಕಾಗಿ, ತಮ್ಮ ಪಕ್ಷದ ಲಾಭಕ್ಕಾಗಿ ಶಸ್ತ್ರ ಧಾರಿಗಳಿಗೆ ಪ್ರೋತ್ಸಾಹ ಕೊಡುವವರು. ಅಹಿಂಸೆಯ ನಿಯಮ ಗಳನ್ನು ಅನುಸರಿಸದವರು, ಇನ್ನೂ ಕೆಲವರಿದಾರೆ. ಅವರಿಗೆ ಅಹಿಂಸೆ ಬೇಕು, ಆದರೆ ಐಕಮತ್ಯ ಬೇಡ. ಅವರ ಅಸಹಕಾರ ವ್ರತ ಅತಿ ಪೃಥವಾದ್ದು. ಅವರ ವಿಚಾರಲಹರಿ ಸ್ವತಂತ್ರವಾದ್ದು. ತಾವು ನಂಬಿದ ಗುರಿಗಾಗಿಯೇ ದುಡಿವವರ ಜೊತೆಗೆ ಕೂಡ ಸೇರರು. ಆದರೆ ಅಹಿಂಸೆಯ ಸಂಸ್ಥೆಗಾಗಲಿ, ಹಿಂಸೆಯ ಸಂಸ್ಥೆ ಗಾಗಲಿ ಒಂದು ಪಕ್ಷದವರೆಲ್ಲ ಒಂದೇ ದನಿಯಿಂದ ಮಾತಾಡ ಬೇಕಾದ್ದು ಅಗತ್ಯ; ಒಬ್ಬ ವ್ಯಕ್ತಿಯಂತೆ ಕೆಲಸಮಾಡಬೇಕು. ಕೆಲವು ತಪ್ಪು ನಡದಾವು; ತಪ್ಪಾದರೆ ಇನ್ನೂ ಕೊಂಚ ಕಷ್ಟ ವಾದೀತು; ಕೆಲಸ ಹಣ್ಣಾಗಲು ಕೊಂಚ ತಡವಾದೀತು. ಆದರೆ ಒಳಸಂಚು ಪಿತೂರಿ ಭಿನ್ನಾಭಿಪ್ರಾಯಗಳಿಂದ ಗೆಲವೇ ಕೈಬಿಟ್ಟು ಹೋದೀತು; ಗೆಲವು ಸೋಲಾದೀತು.

ಭಾರತವನ್ನು ಎರಡು ಹೋಳು ಮಾಡೋಣ: ಒಂದು ಹಿಂಸಾಪಂಥಿಯಾದ ಸೀಮೆ; ಇನ್ನೊಂದು ತಾನಾಗಿ ನಂಬಿಯೋ ಅನಿವಾರ್ಯವಾಗಿಯೋ ಅಹಿಂಸಾವಲಂಬಿಯಾದ ಸೀಮೆ. ಎರಡಕ್ಕೂ ತನ್ನತನ್ನ ಶಿಸ್ತು-ನಿಯಮ, ಭಕ್ತಿ, ಕಾರ್ಯಕ್ರಮ ಇರುತ್ತವೆ ಅದರಲ್ಲಿ ಕೊಂಚ ಲೋಪ ಬಂದರೂ ಸೋಲು ಸಂಕಟ ತಪ್ಪಿದ್ದಲ್ಲ. ನಿರೋಧಪ್ರಯತ್ನಕ್ಕಾಗಿ ಏರ್ಪಾಟು ಮಾಡಿಕೊಳ್ಳುವಾಗ ಕಷ್ಟವಾದ ಕೆಲಸ ಇಷ್ಟವಿಲ್ಲದ ಕರ್ತವ್ಯ ಬಂದೇ ಬರುತ್ತವೆ. ಅಷ್ಟೋ ಇಷ್ಟೋ ತ್ಯಾಗಮಾಡಬೇಕು, ಸ್ವಂತ ಅಭಿಪ್ರಾಯವನ್ನು ಅದುಮಿಡಬೇಕು, ಸ್ವಾತಂತ್ರ್ಯ ಕಳೆದು

ಕೊಳ್ಳಬೇಕು. ಇವೆಲ್ಲವನ್ನೂ ಹಿಂಸಾಪಂಥದಲ್ಲಿ ಬಲಾತ್ಕಾರ ದಿಂದ ಸಾಧಿಸಬಹುದು. ಅಹಿಂಸೆಯಲ್ಲಿ ಮಾಡಬಹುದಾದ ಬಲಾತ್ಕಾರವೆಲ್ಲ ಅವಿಧೇಯನನ್ನು 'ಹೊರಗೆ ನೂಕುವುದು ; ಅದೇ ಕೊನೆ. ಹೀಗೆ ಬಹಿಷ್ಕಾರ ಹಾಕಿದ ಮಾತ್ರಕ್ಕೇ ತೊಂದರೆ ಪರಿಹಾರವಾಗದು. ಒಂದುವೇಳೆ ಕಷ್ಟ ಹೆಚ್ಚಿದರೂ ಹೆಚ್ಚೀತು. ಕಾಂಗ್ರೆಸ್ಸು ಅವಿಧೇಯರನ್ನು ಶಿಸ್ತು ಭಂಗಕ್ಕಾಗಿ ಬಹಿಷ್ಕರಿಸಿದ ಸಂದರ್ಭಗಳಲ್ಲಿ ಹೀಗೇ ಆಗಿದೆ. ಹೀಗೆ ಮಾಡಬೇಕಾಗಿ ಬರ ಬಹುದಾಗಲಿ ಇಂಥ ಬಹಿಷ್ಕಾರ ತನ್ನ ಮೈಯ ಅಂಗಗಳನ್ನೇ ತಾನು ಕೊಯಿದುಕೊಂಡಂತೆ ಎಂಬುದನ್ನು ನೆನಪಿಡಬೇಕು. ಸಂಸ್ಥೆಗಳಲ್ಲಿ ಇಂಥ ಸಂದರ್ಭ ಬಹಳ ದೌರ್ಭಾಗ್ಯ ಪ್ರಸಂಗ. ಅಂತೆಯೇ ಇದು ಅಂತಿಮ ಉಪಾಯ. ಬುದ್ಧಿವಾದ, ಉನ್ನತ ಗುಣಪ್ರಚೋದನಗಳೆಲ್ಲ ವ್ಯರ್ಥವಾದಾಗಲೇ ಈ ಕಾರ್ಯ. ಆಗ ಶಿಸ್ತುಭಂಗವನ್ನು ನಿರ್ಲಕ್ಷಿಸುವುದು ಅಪಾಯಕರ. ಆದ್ದರಿಂದ ಅಹಿಂಸಾ ಪ್ರತೀಕಾರವನ್ನು ಮಾಡಬಯಸುವವರು ರಾಷ್ಟ್ರಹಿತದ ವಿಷಯಗಳಲ್ಲಿ ತಾವೇ ಆರಿಸಿಕೊಂಡ ಕೆಲವರು ನಾಯಕರ ಅಭಿ ಪ್ರಾಯಕ್ಕೆ ತಲೆಬಾಗಲು ಒಪ್ಪಿಕೊಳ್ಳಬೇಕು.

ತಮ್ಮ ನಾಯಕರು ಪೂರ್ಣ ವಿವೇಕಿಗಳು ನಿರ್ಮಲಚರಿತ್ರರು ನಿಸ್ಸಂದೇಹವಾದ ದೇಶಾಭಿಮಾನಿಗಳು ಎಂಬುದನ್ನು ಮಾತ್ರ ಮೊದಲು ದೃಢಮಾಡಿಕೊಳ್ಳಬೇಕು.

ಇದು ಅಗತ್ಯ; ಇದನ್ನು ಸಾಧಿಸುವುದು ಬಲು ಕಷ್ಟ ವಾದೀತು. ಪ್ರತ್ಯಕ್ಷ ಅವಿಧೇಯತೆಯೆ ಅಲ್ಲದೆ, ನಮ್ಮ ರಕ್ತದಲ್ಲೆ ಇರುವ ಅಸಹಕಾರ ಗುಣದಿಂದ ಹಲವಾರುಬಗೆಯಲ್ಲಿ ತೊಂದರೆ ಬರಬಹುದು. ವಿರೋಧವಿಲ್ಲದಿರಬಹುದು, ಮಾಡುವುದಿಲ್ಲ

ಎನ್ನದಿರಬಹುದು, ಅಹಿಂಸಾನಾಯಕರ ಅನುಯಾಯಿಗಳಿಗೆ ತೊಂದರೆ ಕೊಡದಿರಬಹುದು; ಅವರ ಬಿನ್ನಹವನ್ನು ಕೇವಲ ಉದಾಸೀನ ಮಾಡಿದರೆ ಸಾಕು. ಈ ಸುಲಭವಾದ ಅಸಹಕಾರ ನಮ್ಮವರಿಗೆ ಬಹಳ ಪರಿಚಯವಾದ ದಾರಿ. ಎಲ್ಲ ಸ್ಥಳೀಯ ಸಂಸ್ಥೆಗಳಿಗೂ ರಚನಾಕರ್ತರಿಗೂ ನಮ್ಮ ಜನರ ಈ ನಿಷ್ಕ್ರಿಯಾ ಸಹಕಾರದ ಅನುಭವ ನಾಕಷ್ಟಿದೆ. ಇದು ಬರೀ ಅಜ್ಞಾನ ನಿರಕ್ಷರತೆ ಸೋಮಾರಿತನದ ಫಲವಲ್ಲ. ಉದ್ದೇಶ ಪೂರ್ವಕವಾಗಿ ಮಾಡಿದ ಸದ್ದಿಲ್ಲದ ಅಸಮ್ಮತಿ. ಅವಾಹಕಗಳ ನಡುವೆ ವಿದ್ಯುತ್ತು ಹರಿದೀತು, ಇಂಥ ಅಸಹಕಾರದ ಇದಿರು ಅಹಿಂಸಾತ್ಮಕ ಸಂಸ್ಥೆ ಗೆಲ್ಲಲಾರದು.

ಆದರೆ ಈ ಅಡ್ಡಿ ಆತಂಕಗಳನ್ನು ಇದಿರಿಸಲೇಬೇಕು, ಗೆಲ್ಲಲೇ ಬೇಕು.

---

## ೧೦

## ಹಿಂಸಾ ಸಂಸ್ಥೆಗಳಿಗೂ ಅಹಿಂಸಾ ಸಂಸ್ಥೆ ಗಳಿಗೂ ಸಮಾನ ಸಂಗತಿಗಳು

ಹಿಂಸಾ ಪ್ರತೀಕಾರಕ್ಕೂ ಅಹಿಂಸಾ ನಿರೋಧಕ್ಕೂ ಸಮಾನ ವಾದ ವಿಷಯ ಕೆಲವು ಇವೆ

ಕದನ ತೀವ್ರವಾದ ಹಾಗೆ, ಕದನರಂಗ ವಿಸ್ತಾರವಾದ ಹಾಗೆ, ಹಿಂಸೆ ಅಹಿಂಸೆ ಎರಡರಲ್ಲೂ ಕೊಂಚಮಟ್ಟಿಗೆ–ಸಾಧಾರಣ ಬಾಳು ವೆಯಲ್ಲಿ ಅವ್ಯವಸ್ಥೆ, ಕಷ್ಟ, ಬಂಧುಮಿತ್ರವಿಯೋಗ, ಅಧಿಕವ್ಯಯ,

ವ್ಯಾಪಾರನಷ್ಟ, ಲಾಭಹಾನಿ, ಕದನಕ್ಕಾಗಿ ಸ್ವೇಚ್ಛೆಯಿಂದಲೋ ಬಲವಂತವಾಗಿಯೋ ಕೊಡಬೇಕಾದ ತೆರಿಗೆ, ಪ್ರಾಣಭಯ, ಆಸ್ತಿನಾಶ ಭಯ, ಅಭಾವ, ಅತಿ ದುಡಿತ, ಅಭ್ಯಾಸವಿಲ್ಲದ ಕೆಲಸ ಗಳ ನಿರ್ವಹಣ–ಇತ್ಯಾದಿಗಳು ಸಂಭವಿಸುತ್ತವೆ.

ಹಾಗೆಯೆ ಸಾವು, ಪೀಡೆ, ವಿನಾಶ, ಆಸ್ತಿನಾಶ; ಹೆಂಗಸ ರಾದರೆ ಅತ್ಯಾಚಾರಭಯ–ಎರಡು ವಿಧಾನಗಳಲ್ಲೂ ಇವೆ.

ಆದರೆ ಉಭಯಪಕ್ಷದಲ್ಲೂ ಹಿಂಸಾವಿಧಾನವಾದಾಗ ಆಗುವ ಕಷ್ಟನಷ್ಟ ಹೆಚ್ಚು; ಒಂದೇಕಡೆ ಹಿಂಸೆಯಾದರೆ ಕಡಮೆ ಎಂಬುದು ಸುಲಭವಾಗಿಯೇ ತಿಳಿಯುತ್ತದೆ. ಇದಿರಾಳಿಗೆ ಮದ್ದು ಗುಂಡು ಇಲ್ಲವೆಂದು ತಿಳಿದಾಗ ದಾಳಿಗಾರ ಫಿರಂಗಿ ವಿಮಾನ ಬಾಂಬು ಮುಂತಾದ್ದನ್ನು ತಯಾರಿಸಿ ತರುವ ಗೋಜಿಗೆ ಹೋಗ ಲಾರ. ಈ ಅಹಿಂಸಾವಾದಿಗಳನ್ನು ಬೆದರಿಸಲು ಎಲ್ಲೋ ನಾಲ್ಕು ತಂದಾನು. ಒಂದುವೇಳೆ ಅಶಸ್ತ್ರಪಾಣಿಗಳಾದ ಇಡೀ ಜನಾಂಗ ವನ್ನೇ ಕತ್ತರಿಸಿ, ತನ್ನ ಪೀಡೆಗೆ ಗುರಿಯಾದವರನ್ನು ಪ್ರತ್ಯಕ್ಷ ವಾಗಿ ತಾನು ಕಾಣುವ ಇಷ್ಟವಿಲ್ಲದೆ, ತನ್ನ ಮನಸ್ಸಿಗೆ ಹಾಯಿ ಬಯಸಿದರೂ ಇಷ್ಟು ವಿಸ್ತಾರವಾದ ಯಂತ್ರಸೇನಾಬಲ ಅವನಿಗೆ ಬೇಕಾಗಿಲ್ಲ. ಇದಿರಾಳಿಗಳಾದ ಅಹಿಂಸಾಪಂಥಿಗಳನ್ನು ಹಿಂದು ಸ್ಥಾನದಲ್ಲಿ ಅಮೇರಿಕಾದಲ್ಲಿ ಇರುವ ಕಾಡುಜನರ ಸ್ಥಿತಿಗೆ ತಂದಿ ಟ್ಟಾನು, ನಿಜವೆ. ಆದರೆ ಹಿಂಸಾ ಪ್ರತೀಕಾರದಲ್ಲಿ ಸೋತಾಗ ಆಗುವ ನಷ್ಟಕ್ಕಿಂತ ನಾಶಕ್ಕಿಂತ, ಅಹಿಂಸೆಯಲ್ಲಿ ಹೆಚ್ಚು ಆದೀತೆ? ಹಿಂಸೆಯಿಂದ ಗೆಲ್ಲಬೇಕಾದರೆ ಇದಿರಾಳಿಯ ಹಿಂಸೆಗಿಂತ ನಮ್ಮದು ಇಮ್ಮಡಿ ಭೀಕರವಾಗಬೇಕು. ಎಲ್ಲೋ ಒಂದೆಡೆ, ವ್ಯರ್ಥಹಿಂಸೆ ಮಾಡಿದರೆ ಏನು ಪ್ರಯೋಜನ? ಅಹಿಂಸೆಯಲ್ಲಿ ಗೆದ್ದರೆ, ಮಾನವ

ಸಮಾಜದ ಇನ್ನೊಂದು ಗುಂಪಿನೊಡನೆ ಸ್ನೇಹವಾಗಿದ್ದೀರಿ; ನಿಮ್ಮ ಅಹಿಂಸೆ ಪರಿಣಾಮಕಾರಿಯಾಗದಿದ್ದರೆ, ನಡುವೆಯೇ ನೀವು ಧೈರ್ಯಗೆಟ್ಟರೆ, ಅದರಿಂದ ಏನು ಅವಮಾನವೋ? ೧೯೧೮ ರಲ್ಲಿ ಜರ್ಮನಿಗೆ ಆದ, ಮೊನ್ನೆ ಫ್ರಾನ್ಸಿಗೆ ಆದ ಅವಮಾನ ಕ್ಕಿಂತಲೂ ಅವಮಾನವೆ?

ಅಂತೇ, ಹಿಂಸಾಕದನಕ್ಕಿರುವ ಆತಂಕ ಆಪತ್ತುಗಳೇ ಅಹಿಂಸಾಯುದ್ಧಕ್ಕೂ ಇವೆ. ಹಿಂಸೆಯಲ್ಲಿ ಪ್ರತಿಪಕ್ಷವನ್ನು ಸೋಲಿಸಲು ಕ್ರೂರ ಧೈರ್ಯ ಬೇಕು. ಅಹಿಂಸೆಯಲ್ಲಿ ಪ್ರತೀಕಾರ ಬುದ್ಧಿಯಿಲ್ಲದೆ ಆಪತ್ತನ್ನು ಇದಿರಿಸಲು ಶಾಂತಸ್ಥೈರ್ಯ ಬೇಕು. ಶಸ್ತ್ರಪಾಣಿಯಾದ ಸಿಪಾಯಿಯ ಕ್ರೂರ ಧೈರ್ಯದಲ್ಲೂ ಯುದ್ಧದ ಅಪಾಯವನ್ನು ತಪ್ಪಿಸಿಕೊಳ್ಳುವ ಬಯಕೆ ಇದೆ. ಹಿಂಸಾಯುದ್ಧ ಬರೀ ಆಕ್ರಮಣ ಪ್ರಧಾನವಲ್ಲ. ಆಕ್ರಮಣವೂ ಇದೆ, ಸ್ವಸಂರಕ್ಷಣೆಯೂ ಇದೆ. ಅದೇ ಶಾಂತಸ್ಥೈರ್ಯದಲ್ಲಿ ಅಪಾಯದಿಂದ ಓಡಿಹೋಗುವ ಪ್ರಯತ್ನವಿಲ್ಲ; ಆದ್ದರಿಂದ ಸ್ವಸಂರಕ್ಷಣೆಯೇ ಇಲ್ಲ 'ಅಪಲಾಯನ' ನೀತಿ. ಆಕ್ರಮಣವಂತೂ ಇಲ್ಲವೇ ಇಲ್ಲ. ಅದೊಂದು ಅಗ್ನಿಪರೀಕ್ಷೆ. ಹಿಂದಿನ ಕಾಲದಲ್ಲಿ ತಮ್ಮ ನಿಷ್ಕಳಂಕವನ್ನು ತೋರಲು ಜನ ಮಾಡುತ್ತಿದ್ದಂಥದು.

ಎರಡೂ ವಿಧಾನಗಳಿಗೂ ನಿರ್ಮಾಣ ಕಾರ್ಯಕ್ರಮ ಅತ್ಯಗತ್ಯ. ಪೂರ್ವಸಿದ್ಧತೆಗೂ ಸಂಗ್ರಾಮಕಾಲಕ್ಕೂ ಎರಡಕ್ಕೂ ನಿರ್ಮಾಣ ಕಾರ್ಯಕ್ರಮ ಅಗತ್ಯ. ಶ್ರೀ ವಿನೋಬಾ ಒಂದು ಲೇಖನದಲ್ಲಿ ಹೇಳಿದಾರೆ: 'ಯೂರೋಪಿನ ಯುದ್ಧ ಹಿಂಸಾಮಯ, ನಮ್ಮದು ಅಹಿಂಸಾಮಯ; ಆದರೂ ಯುದ್ಧದಿಂದ ನಾವು ಕಲಿಯಬೇಕಾದ ಪಾಠ ಎಷ್ಟೋ ಇವೆ. ಯುದ್ಧಕ್ಕೆ ಯಾವ ಆಯುಧವನ್ನೇ

ಹಿಡಿಯಲಿ, ಇಂದಿನ ಯುದ್ಧವೆಂದರೆ ಸರ್ವವ್ಯಾಪಿಯಾದ ಸಾಮೂಹಿಕ ಸಹಕಾರವಿಲ್ಲದೆ ಸಾಧ್ಯವಿಲ್ಲ. ಅದರ ಗುರಿ ವಿಧ್ವಂಸ, ವಿನಾಶ ಆದರೂ ಆದರ ಸರ್ವಸನ್ನಾಹವೂ ರಚನಾತ್ಮಕ. ಜರ್ಮನಿ ಎಂಟುಕೋಟಿ ಜನರ ದೇಶ. ೭೦ ಲಕ್ಷ ಸೇನೆಯನ್ನು ಸಿದ್ಧಮಾಡಿದಾರೆ ಯುದ್ಧಕ್ಕೆ; ಮದ್ದು, ಗುಂಡು, ಬಾಂಬು ಟ್ಯಾಂಕು ತಯಾರುಮಾಡಿ ಅನ್ನ ನೀರು ಒದಗಿಸಿದಾರೆ; ಸೇನೆಗೆ ಸೇರಿದವರು ಸೇರಲಾಗಿ ಉಳಿದವರಿಂದ ದೇಶದ ಆಡಳಿತವನ್ನು ಸುಗಮವಾಗಿ ನಡೆಸುತ್ತಿದಾರೆ; ದೇಶದ ಉದ್ಯೋಗ ಅಂತರಾಯವಿಲ್ಲದೆ ನಡೆವಹಾಗೆ ಮಾಡಿದಾರೆ; ಸಂಪತ್ಪ್ರವಾಹ ಒಂದೇಸಮನೆ ಹರಿವಂತೆ ಮಾಡಿದಾರೆ; ಇದಕ್ಕಾಗಿ ಶಾಲೆ ಕಾಲೇಜು ಮುಚ್ಚಿದಾರೆ; ಉದ್ಯೋಗಗಳನ್ನೆಲ್ಲಾ ಸರಕಾರದ ಸ್ವಾಧೀನ ಮಾಡಿದಾರೆ; ಜೀವನದ ಅಗತ್ಯಪದಾರ್ಥಗಳನ್ನು ನಿಗದಿ ಮಾಡಿದಾರೆ; ದೇಶದಲ್ಲಿ ಒಗ್ಗಟ್ಟು ತಂದು ಇಡೀ ರಾಷ್ಟ್ರವು ಒಂದೇ ಮನಸ್ಸಿನಿಂದ ಒಂದೇ ಕೆಲಸದಲ್ಲಿ ತೊಡಗುವಂತೆ ಮಾಡಿದಾರೆ; ದೇಶವನ್ನೇ ಒಂದು ವ್ಯಕ್ತಿಯಾಗಿಸಿದಾರೆ; ಹೃದಯದಿಂದ ನಡಸಲ್ಪಡುವ ಅಂಗಾಂಗ ಸಮುದಾಯವಾದ ದೇಹದಂತೆ ಮಾಡಿದಾರೆ. ಈ ಸರ್ವತೋಮುಖವಾದ, ಸರ್ವವ್ಯಾಪಿಯಾದ ವಿಶಾಲ ಕಾರ್ಯಕ್ರಮದ ಉದ್ದೇಶ ವಿನಾಶವೇ ಆದರೂ ಅದರಿಂದ ನಾವು ಕಲಿಯಬೇಕಾದ ಪಾಠ ಬಹಳ ಇದೆ".

---

## ೧೧
## ಅಹಿಂಸೆಯ ಪೂರ್ವಸಿದ್ಧತೆ

ಅಹಿಂಸಾ ವ್ಯವಸ್ಥೆಗೆ ಪೂರ್ವಸಿದ್ಧತೆ ಏನುಬೇಕೋ ನೋಡೋಣ.

ಸಾಧಾರಣ ಮನುಷ್ಯನಿಗೆ ಸಾಧ್ಯವಾದದ್ದಕ್ಕಿಂತ ಹೆಚ್ಚಿನ ಅಹಿಂಸೆಯನ್ನಾಗಲಿ ಔದಾರ್ಯವನ್ನಾಗಲಿ ನಾನು ಲೆಕ್ಕ ಹಿಡಿಯುವುದಿಲ್ಲ. ವ್ಯಾವಹಾರಿಕ ಅಹಿಂಸೆಯ ವಿವರಣೆಯಲ್ಲಿ ನಾನು ಹೇಳಿದಂತೆ, ಹಿಂಸೆಯ ಅಭಾವ, ಔದಾರ್ಯ ಅನುಗ್ರಹದ ಸ್ವಭಾವವೆ ಅಹಿಂಸೆ. ಅದರಲ್ಲಿ ಸ್ವಾರ್ಥವಿಲ್ಲದಿಲ್ಲ; ಆದರೆ ನ್ಯಾಯವಾದ ಸ್ವಾರ್ಥ.

ಅಂದರೆ ಜನಕ್ಕೆ ಇಷ್ಟನ್ನು ಸ್ಪಷ್ಟವಾಗಿ ತಿಳಿಸಿ ಹೇಳಬೇಕಾದ್ದು ಅಗತ್ಯ :—

೧. ಏನೇ ಬರಲಿ ಹಿಂಸೆ ಸಲ್ಲದು. ಎಷ್ಟೇ ರೇಗಿಸಲಿ, ಮನಸ್ಸು ಕುದಿಯಲಿ, ತನಗೆ ಏನೂ ಅಪಾಯವಿಲ್ಲದೆಯೇ ಹಿಂಸೆ ಮಾಡಬಹುದಾಗಿರಲಿ–ಹಿಂಸೆ ಸಲ್ಲದು.

೨. ವೈರಿಮಾಡಿದ ಎಂಥ ಅಮಾನುಷ ಕೃತ್ಯಕ್ಕೂ ಪ್ರತೀಕಾರ ಸಲ್ಲದು. ಸೇಡಿನ ಭಾವನೆಯೆ ಹೊಲ್ಲ. ತಾವೂ ಉದಾರರಾಗಿರಬೇಕು; ತಮ್ಮನ್ನು ನಡಸುವ ಸಂಸ್ಥೆಯೂ ಹಾಗೇ ಕ್ಷಮಾಶೀಲವಾಗಿದ್ದೀತೆಂದು ನಿರೀಕ್ಷಿಸಬೇಕು.

೩. ಗೆಲವು ದೊರೆತಾಗ ಅನ್ಯಾಯವಾಗಿ ಲಾಭ ಸಂಪಾದಿಸಬಾರದು.

೪. ವೈರಿಗಳಿಗೆ ಸಂಬಂಧಿಸಿದ್ದೇ ಆಗಲಿ, ತಮ್ಮ ಜನರಲ್ಲೇ ಉಳಿದವರಿಗೆ ಸಂಬಂಧಿಸಿದ್ದೇ ಆಗಲಿ, ಯಾವುದಾದರೂ ಅನ್ಯಾಯವಾದ ಹಕ್ಕನ್ನು ಲಾಭವನ್ನು ತಾವು ಅನುಭವಿಸುತ್ತಿದ್ದರೆ ಅದನ್ನು ಬಿಟ್ಟುಕೊಡಲು ಸಿದ್ಧರಾಗಬೇಕು.

೫. ಅನುಕೂಲವಂತರು ತಮ್ಮ ಹಣದಲ್ಲಿ ಬಡವರಿಗೆ ಕೊಂಚ ಪಾಲು ಕೊಡಬೇಕು. ದಲಿತರನ್ನು ಮೇಲೆ ತರಲು,

ಬಡವರಿಗೆ ನಿರುದ್ಯೋಗಿಗಳಿಗೆ ನೆರವಾಗಲು, ಕೈಗೊಂಡ ಎಲ್ಲ ಕಾರ್ಯಗಳಿಗೂ ಅವರು ಧಾರಾಳವಾಗಿ ನೀಡಬೇಕು.

೬. ಈಗ ಉಪದೇಶಿಸುತ್ತಿರುವ ಅಹಿಂಸಾತ್ಮಕ ಅಸಹಕಾರಕ್ಕೂ ಹಿಂದಿನ ಕಾಲದಲ್ಲಿ ಹಿಂದುಸ್ಥಾನದಲ್ಲಿ ರೂಢಿಯಲ್ಲಿದ್ದ ಅಸಹಕಾರಕ್ಕೂ ವ್ಯತ್ಯಾಸವಿದೆ. ಅದರಲ್ಲಿ ಮೈಗಾಯ ಮಾಡುವುದೆಂದು ಬಿಟ್ಟು ಉಳಿದೆಲ್ಲ ಬಗೆಯ ಹಿಂಸೆಯೂ ಇತ್ತು. ಇದಿರು ಪಕ್ಷದ ಬಗ್ಗೆ ಪ್ರೀತಿ, ದಯೆ, ಕ್ಷಮೆ ಕೊಂಚವೂ ಇರಲಿಲ್ಲ. ಕಡುತರ ದಂಡ ತೆಗೆದುಕೊಂಡೋ ತೀಕ್ಷ್ಣ ಅವಮಾನಕ್ಕೆ ಗುರಿಮಾಡಿಯೋ ಆ ಬಹಿಷ್ಕಾರ ಉಪಸಂಹಾರ; ಇಲ್ಲದಿದ್ದರೆ ಇಲ್ಲ. ಇದಿರುಪಕ್ಷದವರೂ ನಮ್ಮ ಅಣ್ಣ ತಮ್ಮದಿರು; ದಾರಿಕೆಟ್ಟ ಅವರನ್ನು ದಾರಿಗೆ ತರಬೇಕೆಂಬ ಭಾವನೆಯಲ್ಲ; ತುಳಿದು ಹಾಕಬೇಕಾದ ಹಗೆ ಎಂದು. ಅಹಿಂಸಾತ್ಮಕ ಅಸಹಕಾರದ ಮನೋವೃತ್ತಿ ಬೇರೆ. ಇಲ್ಲಿ ಪ್ರತಿರೋಧದ ಉದ್ದೇಶ ಜಯಭೇರಿ ಬಾರಿಸುವುದಲ್ಲ, ವೈರಿ ವಿನಾಶವಲ್ಲ; ಉಭಯಪಕ್ಷಕ್ಕೂ ಗೌರವ ತರುವ ಚಿರಸ್ನೇಹ. ವಂಶಪಾರಂಪರ್ಯವಾಗಿ ಬೆಳೆಯುವ ದ್ವೇಷವಲ್ಲ. ಕೊಂಚ ಅನುಕೂಲಕಾಲ ಬಂದೊಡನೆ ನಿಲ್ಲಿಸಬೇಕಾದ ಬಹಿಷ್ಕಾರ. ಆ ಅಸಹಕಾರವೂ ಅಗತ್ಯಕ್ಕೆ ತಕ್ಕಷ್ಟುಮಟ್ಟಿಗೆ ಮಾತ್ರ ಇರಬೇಕು.

೭. ಹಿಂದೆಯೇ ಹೇಳಿದಂತೆ, ಅಹಿಂಸಾ ಪ್ರತಿರೋಧವೆಂದರೆ ಸರ್ವಸುಕ್ಷೇಮ ಎಂದು ತಿಳಿಯಬಾರದು. ಅದರಲ್ಲೂ ಯುದ್ಧ ಸಹಜವಾದ ಎಲ್ಲ ಗಂಡಾಂತರವೂ ಇದೆ ಪ್ರತಿಹಿಂಸೆಯ ಗಂಡುತನವಿಲ್ಲ. ಈ ಅಗ್ನಿಪರೀಕ್ಷೆಗೆ ಜನ ಸ್ಥಿರಸಂಕಲ್ಪದಿಂದ ಸಿದ್ಧರಾಗಬೇಕು.

೮. ಜನರು ತಮ್ಮ ನಾಯಕರನ್ನು ಪೂರ್ಣವಾಗಿ ನಂಬೇಕು. ನಾಯಕರು ಒಪ್ಪದ ಯಾವ ಸಂಧಿಗೂ ಜನ ಒಪ್ಪಬಾರದು. ಮತ್ತಾರ ಮಾತಿನಿಂದಲೂ ಕಾರ್ಯಕ್ರಮವನ್ನು ಬದಲಿಸಬಾರದು ; ನಿಲ್ಲಿಸಬಾರದು. ತಮ್ಮ ನಾಯಕರು ದೇಶದ್ರೋಹ ಮಾಡರೆಂಬ ನಂಬಿಗೆ, ಅನಗತ್ಯವಾದ ಸಂಕಟದಲ್ಲಿ ದೇಶವನ್ನು ನೂಕರೆಂಬ ವಿಶ್ವಾಸ ಅವರಿಗಿರಬೇಕು.

---

## ೧೨

## ವ್ಯವಸ್ಥಾಪಕರ ಲಕ್ಷಣ

ಮಹಾಜನರ ಮಾತು ಇಷ್ಟಾಯಿತು. ಇಂಥ ಸಂಸ್ಥೆ ರಾಷ್ಟ್ರ ವ್ಯಾಪಿಯಾದಾಗ ಎಷ್ಟೋಜನ ಪ್ರಾಂತನಾಯಕರೂ ಸ್ಥಳೀಯ ನಾಯಕರೂ ಕೆಲಸಗಾರರೂ ಬೇಕು. ಅವರೆಲ್ಲರೂ ರಾಷ್ಟ್ರೀಯ ನೀತಿಯನ್ನೂ ನಾಯಕರು ನಿರ್ಧರಿಸಿದ ಸಮರ ರೀತಿಯನ್ನೂ ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು. ಅದನ್ನು ಆಯಾ ಸ್ಥಳದ ಪರಿಸ್ಥಿತಿಗೆ ಹೊಂದುವಂತೆ ಮಾಡಿಕೊಂಡು ಜನಕ್ಕೆ ಅದನ್ನು ತಿಳಿಸಿ ಹೇಳುವವರಾಗಬೇಕು. ಗಾಂಧೀಜೀ ಹೇಳುವ 'ಧೀರರ ಅಹಿಂಸೆ' ಇವರಿಗೆ ಬೇಕು. ಅದರ ಅರ್ಥ – ನಮಗೆ ಆಯುಧ ಗಳಿಲ್ಲ, ಅಸಹಾಯರು, ಆದ್ದರಿಂದ ಅಹಿಂಸೆಯನ್ನು ಹಿಡಿಯ ಬೇಕು ಎಂಬುವರು ಈ ಚಳುವಳಿಯ ವ್ಯಾಖ್ಯಾನಕಾರರಾಗಲಿ ವ್ಯವಸ್ಥಾಪಕರಾಗಲಿ ಆಗಬಾರದು. ಅಹಿಂಸೆ ನೀತಿಯಿಂದಲೂ ದೊಡ್ಡದು ; ವ್ಯವಹಾರದಲ್ಲೂ ಮೇಲು ; ಶಸ್ತ್ರಸಜ್ಜಿತರಾದ ರಾಷ್ಟ್ರಗಳಿಗೂ ಅನುಸರಣೀಯ ಎಂದು ನಂಬಿದವರು ಅಹಿಂಸಾ ಸಂಘಟನೆ ಮಾಡಬೇಕು. ದೌರ್ಬಲ್ಯ, ಸಂದೇಹ, ಅಸಹಾಯತೆ

ಯಿಂದ ಬರುವುದು ಅಹಿಂಸೆಯಲ್ಲ–ಹಿಂಸೆ, ನೀತಿರಹಿತ ಸ್ವಾರ್ಥ. ಶರಣಾಗತಿಯೊಂದೇ ಅಲ್ಲ ಭಯದ ಪರಿಣಾಮ ; ಪ್ರಾಣದಹಂಗು ತೊರೆದು ಕಾದುವ ಧೈರ್ಯವೂ ಅದರ ಪರಿಣಾಮವೇ. ಈ ಮಾತು ವಿಚಿತ್ರವಾಗಿ ಕಂಡೀತು. ಆದರೆ ಹೆದರಿದಾಗ ಬೆಕ್ಕು ಹೀಗೇ ಮಾಡುತ್ತದೆ. ಶರಣಾಗತಿಯೂ ಯಾವಾಗಲೂ ಭಯದ ಫಲ ವಲ್ಲ ; ಧೈರ್ಯದ ಪ್ರಭಾವವೂ ಆಗಬಹುದು. ಯಾರಾದರೂ ದಾಳಿ ಬಂದಾಗ ಎಲ್ಲ ರಾಷ್ಟ್ರಗಳೂ ಮೊದಲು ' ಕಡೆತನಕ ಕಾದುತ್ತೇವೆ, ಪ್ರತಿಯೊಬ್ಬರೂ ಮಡಿದರೂ ಮೊರೆಹೊಗುವುದಿಲ್ಲ ' ಎನ್ನುತ್ತವೆ. ರಾಜಾಸ್ಥಾನದ ಕೆಲವುಕಡೆ ಬಿಟ್ಟರೆ ಈ ಮಾತನ್ನು ಅಕ್ಷರಶಃ ನಡಸಿದ ಸಂದರ್ಭ ಬಹಳ ಕಡಮೆ. ಪ್ರತಿಯೊಂದು ಕಾಲದಲ್ಲೂ ಪ್ರತಿಯೊಂದು ದೇಶದಲ್ಲೂ ಬದುಕಿದರೆ ಗೌರವವಾಗಿ ಬದುಕ ಬೇಕು, ಇಲ್ಲದಿದ್ದರೆ ಇಲ್ಲ ಎಂಬವರಿದಾರೆ. ಆದರೆ ಇಡೀ ರಾಷ್ಟ್ರ ಇಡೀ ಸೇನೆ, ಹೀಗೆ ನಡೆದುದಿಲ್ಲ ಜನರು ಗೌರವಕ್ಕಾಗಿ ಹೊಡೆ ದಾಡಿದಾರೆ ; ತಮ್ಮ ಸರ್ವಸ್ವವನ್ನೂ ತ್ಯಾಗಮಾಡುತ್ತಾರೆ ಕೆಲವು ಕಾಲ. ಕೆಲವುಸಲ ಗೌರವ ಕಾಪಾಡಿಕೊಳ್ಳಲು ಎಷ್ಟು ಪ್ರಯತ್ನ ಮಾಡಿದರೂ ವ್ಯರ್ಥವಾಗುತ್ತದೆ. ಆದರೆ ಎಲ್ಲ ಆಸೆಯೂ ನಂದಿ ಹೋದಮೇಲೂ ಆತ್ಮಗೌರವಕ್ಕಾಗಿ ಮಡಿದವರು ಕಡಮೆ. ಗೌರವದ ಪ್ರೀತಿಗಿಂತ ಜೀವದಾಸೆ ಹೆಚ್ಚು, ಬಹಳ ಜನರಲ್ಲಿ. ಧೀರರೆಂದು ಹೆಸರಾದ ಯೋಧಜನರೂ ಗೌರವಹೀನರಾಗಿ ಬದುಕಲು ಒಪ್ಪದೆ ಇಲ್ಲ. ' ಒಳ್ಳೇಕಾಲ ಬಂದೀತೆಂಬ ಆಸೆ ಯಿಂದ ಬಾಳು ' ಎಂಬ ನಾಣ್ನುಡಿ ಇದೆ. ಸಾಧಾರಣ ಜನ, ಯಾವ ದೇಶದಲ್ಲೇ ಆಗಲಿ, ಇದನ್ನು ನಂಬಿ ಸಾವಿಗಿಂತ ಅವ ಮಾನ ಲೇಸು ಎಂದು ಬದುಕುತ್ತಾರೆ. ಕೈಯಲ್ಲಿ ಆಯುಧವಿದ್ದ ಮಾತ್ರಕ್ಕೇ ಸತ್ತರೂ ಸರಿ ಎಂಬ ದಿಟ್ಟತನ ಧೀರಸಂಕಲ್ಪ,

ಬಾರದು. ವೈರಿಯನ್ನು ನಿಶ್ಶಸ್ತ್ರನಾಗಿ ಇದಿರಿಸುವ ಸಂಕಲ್ಪ ಮಾಡಿದವನಿಗಿಂತ ಶಸ್ತ್ರಪಾಣಿ ಧೀರನೇನಲ್ಲ. ಈ ಸತ್ಯದಲ್ಲಿ ನಂಬಿಗೆ ಇಲ್ಲದವರು ಪ್ರಥಮ ಶ್ರೇಣಿಗೆ ಸೇರಬಾರದು. ಅಂಥ ವರು ಹಿಂದೆ ನಿಂತು ಧಾರಾಳವಾಗಿ ಸಹಾಯಮಾಡಲು ಒಪ್ಪಿದರೆ ಎಲ್ಲರಿಗೂಕ್ಷೇಮವಾದೀತು.

ಸ್ಥಳೀಯ ನಾಯಕರು ಕೆಲಸಗಾರರು ಜನಪ್ರಿಯರೂ ಗೌರವಯುತರೂ ಆಗಬೇಕು. ಇಲ್ಲದಿದ್ದರೆ ಚಳುವಳಿ ಜನ ಪ್ರಿಯವಾಗದು. ಅವರು ಜನಪ್ರಿಯರೂ ಗೌರವಿತರೂ ಆಗ ದಿರಲು ಎರಡು ಕಾರಣ ಇವೆ: ೧. ಅವರು ನಿಸ್ವಾರ್ಥಿಗಳು, ಪ್ರಾಮಾಣಿಕರು, ಅವಿಚಲರು ಎಂದು ಜನಕ್ಕೆ ನಂಬಿಗೆಯಿಲ್ಲ; ೨. ಸರಕಾರಿ ನೌಕರರ ಹಾಗೆ ಸನ್ಯಾಸಿಗಳ ಹಾಗೆ ಅವರೂ ಜನ ರಿಂದ ದೂರವಾಗಿ ಪ್ರತ್ಯೇಕವಾಗಿ ಬಾಳುತ್ತಾರೆ. ಎರಡು ಸಂದರ್ಭ ದಲ್ಲೂ ಇಬ್ಬರದೂ ಬೇರೆ ಬೇರೆ ಲೋಕ. ನಡುವೆ ಅಗಾಧ ಜಲ. ಕೆಲಸಗಾರರಿಗೆ ಜನರ ದೌರ್ಬಲ್ಯ ದುರ್ಗುಣ ಗೊತ್ತು. ಆದರೆ ಜನರ ಆಸೆ, ಭಾವನೆ, ತಾಪತ್ರಯಗಳನ್ನು ಅವರು ಅರ್ಥಮಾಡಿ ಕೊಳ್ಳರು. ಜನಕ್ಕೂ ಕೆಲಸಗಾರರಿಗೂ ನಡುವೆ ಈ ಅಗಾಧ ಅಂತರ ಬಂತೋ, ರಾಷ್ಟ್ರೀಯ ಚಳುವಳಿಯಲ್ಲಿ ಜನ ಸೇರರು. ನೀರವವಾಗಿ ಅಸಹಕಾರ ತೋರುತ್ತಾರೆ. ಅವರು ನಂಬದ ನಾಯಕರನ್ನು ಹಿನ್ಸೆಳೆದು, ದೂರದೂರವಾಗಿ ಬಾಳುವ ಕೆಲಸ ಗಾರರು ತಮ್ಮ ಸ್ವಭಾವವನ್ನು ತಿದ್ದಿಕೊಂಡು ಜನರ ಹತ್ತಿರ ಬಾರದೆ ಅಹಿಂಸಾ ವ್ಯವಸ್ಥೆ ಸರಿಯಾಗಿ ನಡೆಯದು.

ವ್ಯಾವಹಾರಿಕ ಅಹಿಂಸೆಯ, ಪ್ರತಿರೋಧ ಚಳುವಳಿಯ ಅರ್ಥ ಚೆನ್ನಾಗಿ ತಿಳಿದರೆ ಕಾಂಗ್ರೆಸ್ಸಿನ ನಿರ್ಮಾಣ ಕಾರ್ಯಗಳನ್ನು

ವ್ಯವಸ್ಥಿತವಾಗಿ ಚುರುಕಾಗಿ ನಡಸಬೇಕೆಂಬುದು ತಿಳಿಯದಿರ ಬಾರದು. ಸ್ವಸಹಾಯದ ಪ್ರವೃತ್ತಿ, ಆತ್ಮವಿಶ್ವಾಸದ ಭಾವನೆ, ದೇಶದ ಅಂತರ್ಭೂತ ಶಕ್ತಿಯ ಜ್ಞಾನ ಜನರಲ್ಲಿ ಮೊಳೆಯಬೇಕು. ಭಿನ್ನ ಭಿನ್ನ ಜಾತಿಗಳಲ್ಲಿ, ತಾವೆಲ್ಲ ಒಂದೇ ದೇಹ ಎಂದು ಬಾಳ ವಷ್ಟು ಐಕಮತ್ಯ ಬರಬೇಕು. ಅವರವರ ಸಂಬಂಧ, ಸಮಾನತೆ ನ್ಯಾಯ ಔದಾರ್ಯಗಳಿಂದ ತುಂಬಿರಬೇಕು. ಎಲ್ಲೂ ನಾವು ಹೆಚ್ಚೆಂಬ ಹೆಮ್ಮೆ, ತಾವು ಕೀಳೆಂಬ ಕಿರಿಮೆ ಇರಬಾರದು. ಯಾರ ಪುಂಡತನಕ್ಕೂ ಬಗ್ಗಬಾರದು, ಹಲ್ಲು ಕಿರಿಯಬಾರದು; ಯಾರಿಗೂ ಅವಮಾನ ಮಾಡಬಾರದು, ಅವಮಾನ ಸಹಿಸ ಬಾರದು; ಕಾಪಟ್ಯಕ್ಕೆ ಮೋಸ ಮುಖಸ್ತುತಿ ಕೂಡದು; ಇದು ಯಾವುದರಲ್ಲೂ ಬಲಾತ್ಕಾರ ಕೂಡದು. ಕವಾಯಿತಿನಲ್ಲೇ ಅಲ್ಲ, ಅಧಿಕಾರಿಗಳೊಡನೆ ವ್ಯವಹಾರದಲ್ಲೂ ನೆಟ್ಟಗೆ ನಿಲ್ಲುವಂತೆ, ದಿಟ್ಟತನ ತೋರುವಂತೆ, ಜನಕ್ಕೆ ಕಲಿಸಬೇಕು. ದಿಟ್ಟತನವೆಂದರೆ ಅವಿನಯವಲ್ಲ. ದಲಿತರಿಗೆ, ಹಸಿದವರಿಗೆ, ಅನಾಥರಿಗೆ, ದಾರಿ ತಪ್ಪಿದವರಿಗೆ ಕೂಡ ಆಶ್ರಯ ದೊರೆಯಬೇಕು. ಹಣವಂತ ರನ್ನು ಸಾರ್ವಜನಿಕ ಹಿತಕ್ಕಾಗಿ ಧನಸಹಾಯ ಮಾಡುವಂತೆ ಪ್ರೋತ್ಸಾಹಿಸಬೇಕು. ನಿರ್ಮಾಣ ಕಾರ್ಯಕ್ರಮವನ್ನು ಚುರು ಕಾಗಿ ನಡಸದೆ, ಅನುಕೂಲವಂತರಾದ ನಾಯಕರೂ ಕೆಲಸ ಗಾರರೂ ಸ್ವಾರ್ಥತ್ಯಾಗ ಸರಳತೆ ಔದಾರ್ಯಗಳ ದಾರಿತೋರದೆ ಯಾವುದೂ ಸಾಧ್ಯವಿಲ್ಲ. ರಾಟೆ ತಿರುಗಿಸುವುದು ಬರೀ ಸಂಕೇತ, ನಿರ್ಮಾಣ ಕಾರ್ಯಕ್ರಮವನ್ನು ನಡಸುವ ಉತ್ಸಾಹದ ಗುರುತು; ಸ್ವರಾಜ್ಯಕ್ಕೆ ಕೆಲಸಗಾರರು ಕೊಟ್ಟ ಸಂಪೂರ್ಣ ಕಾಣಿಕೆಯಲ್ಲ, ಬರೀ ಮುಂಗಡ ಮಾತ್ರ. ನಿರ್ಮಾಣ ಕಾರ್ಯ ಕ್ರಮವನ್ನು ವಿಸ್ತಾರವಾಗಿಯೂ ವಿಶೇಷವಾಗಿಯೂ ಏರ್ಪಡಿಸಿ

ಮುಂದಿನ ಕಂತನ್ನು ಸಲ್ಲಿಸಬೇಕು. ಸ್ವರಾಜ್ಯವೆಂದರೆ ಪರ ಕೀಯ ಪ್ರಭುತ್ವದೊಡನೆ ಒಪ್ಪಂದ ಮಾತ್ರವಲ್ಲ; ನಮ್ಮ ಬೇರೆ ಬೇರೆ ಸಂಸ್ಥಾನ, ಪ್ರಾಂತ, ಜಾತಿಗಳ–ಬೇರೆ ಬೇರೆ ಸಾಂಸ್ಕೃತಿಕ ಸಾಮಾಜಿಕ ಆರ್ಥಿಕ ಗುಂಪುಗಳ ಸಂಬಂಧದ ಪುನರ್ವ್ಯವಸ್ಥೆ. ನಿರ್ಮಾಣ ಕಾರ್ಯಕ್ರಮಕ್ಕೂ ಸ್ವರಾಜ್ಯಕ್ಕೂ ಇರುವ ಸಂಬಂಧ ಇನ್ನೂ ಅರ್ಥವಾಗದವರು ಕನಿಷ್ಠಪಕ್ಷ ಚಳುವಳಿಗೆ ತಡೆಯಾಗ ದಂತೆಯಾದರೂ ನಡೆಯಬೇಕು.

---

## ೧೩

## ಅಧಿನಾಯಕಮಂಡಲಿ

ರಾಷ್ಟ್ರದ ನಾಯಕಮಂಡಲಿಯ ಲಕ್ಷಣ, ಅವರ ಕರ್ತವ್ಯ ಕುರಿತು ನಾಲ್ಕು ಮಾತು.

ಹಿಂದುಸ್ಥಾನವನ್ನು ಬಲಿಷ್ಠ ರಾಷ್ಟ್ರವಾಗಿ ಕಟ್ಟಿ ಸ್ವರಾಜ್ಯ ಸ್ಥಾಪಿಸಿ ಅದರ ಅಹಿಂಸಾಚರಣೆಯ ಪ್ರಭಾವವನ್ನು ಇಡೀ ಜಗತ್ತಿನಲ್ಲೇ ಬೀರಬೇಕಾದರೆ ನಮ್ಮ ದೇಶದಲ್ಲಿ ಜನಹಿತದ ಎಲ್ಲ ವಿಷಯಗಳಲ್ಲೂ ದಾರಿ ತೋರುವ ಕರ್ತವ್ಯವನ್ನು ಮುಖ್ಯ ನಾಯಕಮಂಡಲಿಗೆ ಬಿಡುವ ವ್ಯವಸ್ಥೆ ಬರಬೇಕು. ಅಂಥ ಮಂಡಲಿ ಅದ್ವಿತೀಯವಾಗಿರಬೇಕು. ಮನು, ಮೋಸಸ್, ಮಹಮ್ಮದರ ಸ್ಥಾನವನ್ನು ಆ ಮಂಡಲಿ ವಹಿಸಿಕೊಳ್ಳಬೇಕು. ಅಧಿನಾಯಕತ್ವ ಒಬ್ಬ ವ್ಯಕ್ತಿಯದಾಗಬಹುದು; ಹಲವುಜನ ಒಟ್ಟುಗೂಡಿ ನಡಸಬಹುದು. ಅದು ಮುಖ್ಯವಲ್ಲ. ಆ ಮಂಡಲಿ

ಅಹಿಂಸಾವಲಂಬಿಯೆಂಬುದೂ, ಜನರ ಪ್ರೀತಿ ಗೌರವಗಳೇ ಅದರ ಸರ್ವಬಲವೆಂಬುದೂ ಉದ್ದೇಶಪೂರ್ವಕವಾಗಿ ಅವರು ಜನರಿಗೆ ಏನೂ ಹಿಂಸೆಮಾಡದಿರಲಿಕ್ಕೆ ತಡೆಯಾದೀತು.

ಅಂಥ ಮಂಡಲಿ ಒಂದು ಕಾರ್ಯನೀತಿಯನ್ನು ಸೂಚಿಸಿದರೆ ಶ್ರದ್ಧೆ ಉತ್ಸಾಹಗಳಿಂದ ಜನ ಅದನ್ನು ಚಾಚೂ ಬದಲಿಸದೆ ಅನುಸರಿಸಬೇಕು. ಸೇನೆಯಲ್ಲಿ ಹೀಗೇಕೆ ಎಂದು ಪ್ರಶ್ನೆ ಕೇಳುವ ಅಧಿಕಾರವೇ ಇಲ್ಲ. ಅಹಿಂಸಾ ವ್ಯವಸ್ಥೆಯಲ್ಲಿ ಯಾವುದೇ ಒಂದು ಗೆರೆಯವರೆಗೆ ಹೀಗೇಕೆ ಎಂದು ಕೇಳಬಹುದು. ಆದರೆ ಅಧಿ ನಾಯಕಮಂಡಲಿ 'ಇನ್ನು ಸಾಕು ಪ್ರಶ್ನೆ' ಎಂದು ಹೇಳಿದಾಗ ಪ್ರಶ್ನೆ ನಿಲ್ಲಬೇಕು, ಅನುಸರಣೆ ಮೊದಲಾಗಬೇಕು. ಅಹಿಂಸಾ ಸಂಸ್ಥೆ ಬಲಾತ್ಕಾರ ಮಾಡುವಂತಿಲ್ಲವಲ್ಲ. ಆದ್ದರಿಂದ ಆದಷ್ಟು ವಿವರವಾಗಿ ತಮ್ಮ ಸೂಚನೆಗಳನ್ನು ವಿಶದಗೊಳಿಸಿ, ಅದರಂತೆ ಮಾಡಬೇಕಾದ ಕಾರಣಗಳನ್ನು ತಿಳಿಸುವುದು ಅಧಿನಾಯಕರಿಗೆ ಸಹಜ.

ದೇಶದ ಮುಖ್ಯ ಮುಖ್ಯ ಜಾತಿ, ಗುಂಪುಗಳ ವಾಚಾಳಿ ಗಳಲ್ಲಿ ಬಹುಸಂಖ್ಯಾಕರ ಮೆಚ್ಚುಗೆ ಗೌರವ ಪಡೆಯದಿದ್ದರೆ ಯಾವ ಗುಂಪೂ ಅಧಿನಾಯಕಮಂಡಲಿಯಾಗಲು ಸಾಧ್ಯವಿಲ್ಲ. ಅನೇಕ ಸಂದರ್ಭಗಳಲ್ಲಿ ವಾಚಾಳಿಗಳಾದವರು ಆಯಾ ಗುಂಪು ಜಾತಿಗಳ ಬಹುಜನ ಹಿತದ ಪ್ರತಿನಿಧಿಗಳಾಗಿರದಿದ್ದರೂ ಜನ ಸಾಮಾನ್ಯರಲ್ಲಿ ಸಂಶಯ, ತಪ್ಪು ತಿಳುವಳಿಕೆ, ಬುದ್ಧಿಭೇದಗಳನ್ನು ಹುಟ್ಟಿಸಲು ಬೇಕಾದಷ್ಟು ಪ್ರಭಾವ ಅವರಿಗೆ ಇರುತ್ತದೆ. ಆದ್ದರಿಂದ ವಿರೋಧಪಕ್ಷ ಪ್ರಾಮಾಣಿಕವಾಗಿದ್ದರೆ ಅವರೊಡನೆ ಒಪ್ಪಂದಕ್ಕೆ ಬರಲು ಸರ್ವಪ್ರಯತ್ನವನ್ನೂ ಮಾಡಬೇಕು. ಅವರ ವಿರೋಧ

ಅಪ್ರಾಮಾಣಿಕವಾದರೆ, ಅದು ಸ್ಪಷ್ಟವಾಗಿ ಜನಕ್ಕೆ ತಿಳಿದು ಅವರ ಜಾತಿ, ಗುಂಪುಗಳಲ್ಲೇ ಅವರ ಬೆಲೆ ಕಡಮೆಯಾಗುವಂತಾಗ ಬೇಕು.

---

## ೧೪
## ಸಂಘಟನೆಯ ಅಗತ್ಯ

ಸಂಘಟನೆಯ ಲಾಭವೇನೆಂದು ದೀರ್ಘವಾಗಿ ಹೇಳಬೇಕಾದ ಅಗತ್ಯವಿಲ್ಲ. ಅಹಿಂಸೆಗೆ ಸಂಘಟನೆಯಿಂದ ಹೆಚ್ಚು ಲಾಭವಿಲ್ಲ; ಅದರಲ್ಲೂ ಹಿಂಸೆಯನ್ನು ತಡೆಗಟ್ಟಲು ಅಹಿಂಸಾ ಸಂಘಟನೆ ಯಂತೂ ನಿಷ್ಪ್ರಯೋಜನ ಎಂಬ ಅಭಿಪ್ರಾಯ ಜನರಲ್ಲಿ ಹರಡಿದೆ. ಅದರಿಂದ ಧೈರ್ಯವೆಂಬುದು ವೈಯಕ್ತಿಕ ಗುಣ; ಒಂಟಿಯಾಗಿರಲಿ ಜೊತೆಯಿರಲಿ ಧೀರ ಧೈರ್ಯವನ್ನೇ ತೋರಿ ಯಾನು; ಹೇಡಿಗಳಾದರೆ ಅಂಥವರು ಸಾವಿರಜನ ಸೇರಿದರೆ ತಾನೆ ಏನು; ಸಂಸ್ಥೆಯ ದೌರ್ಬಲ್ಯ ಹೆಚ್ಚೀತೇ ವಿನಾ ತಗ್ಗದು ಎಂಬ ಭಾವನೆ ಬಂದಿದೆ. ಆದ್ದರಿಂದ ಅಹಿಂಸೆಗೆ ಸಂಘಟನೆ ಮಾಡದಿರುವುದೇ ಉತ್ತಮ ಎನ್ನುತ್ತಾರೆ. ಸಂಸ್ಥೆ, ಸಂಘಟನೆ ಎಂದರೆ ಬಿಕ್ಕಟ್ಟು ಬಹಳ; ಸರಿ, ಅದರಿಂದ ದರ್ಪ ಹಿಂಸೆ ಬರುತ್ತದೆ. ಸಂಘಟನೆಯೆಂದರೆ ಹಿಂಸೆ; ಸಂಘಟನೆಯಿಲ್ಲದಿದ್ದರೆ ಅಹಿಂಸೆ—ಇದು ಆ ತರ್ಕ!

ಇವೆಲ್ಲ ತಮ್ಮ ವ್ಯಾಪ್ತಿ ಮೀರಿದ ಮಾತು. ಇಷ್ಟು ಹಿಗ್ಗಲಿಸಿ ಎಳೆದು ಹೇಳಬಾರದು. ಧೈರ್ಯ–ಹೇಡಿತನ, ಬಲ-ದೌರ್ಬಲ್ಯ ಎರಡೂ ಸಾಂಕ್ರಾಮಿಕ ಗುಣ.

ರಾಮನಾಗಲಿ ಭೀಮನಾಗಲಿ ಒಂಟಿಯಾಗಿ ಸಾಹಸ ಮಾಡದಿರಬಹುದು. ಇಬ್ಬರೂ ತಮ್ಮ ಹೇಡಿತನವನ್ನೇ ದೊಡ್ಡದು ಮಾಡಿಕೊಂಡು ಒಬ್ಬರೊಬ್ಬರ ಅಲ್ಪ ಸ್ವಲ್ಪ ಧೈರ್ಯವನ್ನೂ ಮುಳುಗಿಸಿದರೆ ಅವರು ಜೊತೆಕಟ್ಟುವುದು ತಪ್ಪು. ಒಂಟಿಯಾಗಿರುವುದೇ ಮೇಲು. ಅದೇ ಒಬ್ಬರಿಂದ ಒಬ್ಬರು ಧೈರ್ಯಪಡೆಯ ಬಯಸಿದರೆ ಒಂಟಿತನಕ್ಕಿಂತ ಆ ಜೊತೆ ಲೇಸು. ದೃಷ್ಟಿ ಸರಿಯಾಗಿದ್ದರೆ ಸಂಸ್ಥೆ ಯಾವಾಗಲೂ ಲೇಸು. ಬಿಡಿ ಬಿಡಿ ಮನುಷ್ಯರ ಬಲವನ್ನು ಗುಣಾಕಾರ ಮಾಡಿದರೆ ಸಂಸ್ಥೆಯ ಬಲ ಅದಕ್ಕಿಂತ ಹೆಚ್ಚೇ ಆದೀತು.

ಅಂತೇ ಇಡಿಗಟ್ಟಾಗಲಿ (ಕೇಂದ್ರೀಕರಣ) ಬಿಡಿಗಟ್ಟಾಗಲಿ (ವಿಕೇಂದ್ರೀಕರಣ) ಒಂದು ಧ್ಯೇಯವಲ್ಲ. ಎರಡರಲ್ಲೂ ಲಾಭ ನಷ್ಟಗಳಿವೆ. ಇಡಿಗಟ್ಟಿನ ಭವ್ಯತೆಗಾಗಲಿ ಬಿಡಿಗಟ್ಟಿನ ಸರಳತೆಗಾಗಲಿ ನಾವು ಮನಸೋಲಬೇಕಾಗಿಲ್ಲ. ಹೆಜ್ಜೆ ಹೆಜ್ಜೆಗೂ ಬಾಳಿನ ಕಣಕಣದಲ್ಲೂ ದ್ವಂದ್ವಗಳನ್ನು, ಪರಸ್ಪರ ವಿರುದ್ಧವಾದ ಎರಡು ತತ್ತ್ವಗಳನ್ನು ಸಮನ್ವಯ ಮಾಡಬೇಕು; ಅದು ರಾಷ್ಟ್ರಕ್ಕೆ ಅತ್ಯುತ್ತಮ ಫಲ ಕೊಡುವಂತಾಗಬೇಕು. ವ್ಯಾವಹಾರಿಕ ಅಹಿಂಸೆಯಲ್ಲಿ ಹೇಗೆ ಸ್ವಾರ್ಥ ಇಲ್ಲದಿಲ್ಲವೋ, ನ್ಯಾಯವಾದ ಸ್ವಾರ್ಥ ಇದೆಯೋ, ಆದ್ದರಿಂದ ಇದು ಪೂರ್ಣ ಪರಾರ್ಥ ಅಥವಾ ಅವಿಹಿಂಸೆ ಹೇಗೆ ಅಲ್ಲವೋ, ಅಹಿಂಸೆಯ ಸಂಸ್ಥೆ, ಸಂಘಟನೆಯ ವಿಷಯದಲ್ಲೂ ಹಾಗೇ. ಇತ್ತ ಸಾವಿರದ ಒಕ್ಕೈಯೂ ಆಗಬಾರದು, ಅತ್ತ ಸಾವಿರ ಬಿಡಿ ಕೈಯೂ ಆಗಬಾರದು. ಕಾಲ ದೇಶವನ್ನನುಸರಿಸಿ ಈ ಸಮನ್ವಯ ಬದಲಾದೀತು. ಆದರೆ

ಒಂದು ಭಾವ, ಅದಕ್ಕೊಂದು ಕಾರ್ಯಕ್ರಮ, ಇದ್ದಾಗ ಸಂಸ್ಥೆ ಸಂಘಟನೆ ಅಗತ್ಯ. ಕೆಲವುಮಾತಿನಲ್ಲಿ ಕೇಂದ್ರದಲ್ಲಿ ಸೂತ್ರವಿರಬೇಕು. ಉಳಿದ ಮಾತಿನಲ್ಲಿ ಬಿಡಿ ಭಾಗಗಳಿಗೆ ಸ್ವಾತಂತ್ರ್ಯವಿರಬೇಕು.

---

## ೧೫

## ಸಂಸ್ಥೆಯ ಸ್ವರೂಪ

ಭಾರತದ ಅಹಿಂಸಾ ಸಂಘಟನೆಯಲ್ಲಿ ಒಂದೊಂದು ಬಿಡಿ ಭಾಗದ ಸ್ವರೂಪ, ಕಾರ್ಯ ಏನು ಎಂಬ ಪ್ರಶ್ನೆ ಬರುತ್ತದೆ. ಇಲ್ಲಿ ನಾನು ಬರೆದ ಸೂಚನೆ ನನ್ನ ಕೊನೆಯ ನಿರ್ಧಾರವಲ್ಲ. ಈಗ ನನ್ನ ಮನಸ್ಸಿನಲ್ಲಿರುವ ಭಾವ ಅಷ್ಟೆ.

ಅನೇಕ ಕಾರಣಗಳಿಂದ ಈ ಸಂಸ್ಥೆಗೆ ಹಳ್ಳಿಗಳು ಸರಿಯಾದ ಕೇಂದ್ರವಲ್ಲವೆಂದು ನನಗೆ ಅನಿಸಿದೆ. ಹತ್ತುಸಾವಿರ ಜನ ವಸತಿಯ ಒಂದು ಕಸಬಾ ಆದರೂ ಪರವಾ ಇಲ್ಲ. ಅದಕ್ಕೆ ನೆರೆಹೊರೆ ಹಳ್ಳಿಗಳೂ ಸೇರಬೇಕು. ಅಂತೂ ೧೦-೧೫ ಸಾವಿರ ಜನವಸತಿಗಿಂತ ಕಡಮೆಯಿರದ ಹಳ್ಳಿಗಳ ಗುಂಪೊಂದು ಆಗಬೇಕು. ಪಟ್ಟಣವಾದರೆ ಅದರ ನೆರೆಹೊರೆಯ ಹಳ್ಳಿಗಳೂ ಸೇರಿ ಅದೂ ಒಂದು ಕೇಂದ್ರವಾಗಬಹುದು.

ಪ್ರತಿಯೊಂದು ಕೇಂದ್ರಕ್ಕೂ ಒಂದೊಂದು ಕೆಲಸಗಾರರ ಗುಂಪು ಇರಬೇಕು. ಆ ಗುಂಪು ಸಾಮೂಹಿಕವಾಗಿ ಕೆಲಸ ಮಾಡಬೇಕು. ಬಿಡಿಬಿಡಿಯಾಗಿ ಕೆಲಸ ಮಾಡಬಾರದು. ಬೇರೆ ಬೇರೆ ಕೆಲಸವನ್ನು ಹಂಚಿಕೊಳ್ಳಬಾರದೆಂದಲ್ಲ. ಪ್ರತಿಯೊಂದು ಕೆಲಸಕ್ಕೂ ಬೇರೆ ಬೇರೆ ಉಪಸಮಿತಿಯನ್ನು ರಚಿಸಬೇಕು.

ಈ ಗುಂಪಿನ ಮುಖ್ಯ ಕೆಲಸಗಾರರನ್ನು ಆರಿಸದಿದ್ದರೂ ಚಿಂತೆಯಿಲ್ಲ, ಸ್ವಯಂ ನಿಯಮಿತರಾದರೂ ಅಡ್ಡಿಯಿಲ್ಲ; ತಮಗೆ ತಾವೇ ಮುಂದೆ ಬಂದು ನಿಂತರೂ ಗುಂಪಿನ ಎಲ್ಲ ಸಂಗಡಿಗರ ನಂಬಿಗೆಯನ್ನು ಗಳಿಸದಿದ್ದರೆ ತರುಣಲೋಕದ ಮನಸ್ಸನ್ನು ತನ್ನ ಕಡೆ ಸೆಳೆಯದಿದ್ದರೆ ಏನೂ ಕೆಲಸಮಾಡಲಾರರು. ಜನ ಅಂಥ ಕೆಲಸಗಾರರ ಕೆಲಸದಲ್ಲಿ ನೆರವಾಗುವುದೇ ಅವರ ಪರ ವೋಟು ಇದ್ದ ಹಾಗೆ.

ಇಂಥ ಗುಂಪಿಗೆ ಜಿಲ್ಲಾ ಸಮಿತಿ, ಪ್ರಾಂತ ಸಮಿತಿಯ ಸಹಕಾರ ದೊರೆಯಲು ಆಯಾ ಕೇಂದ್ರದಲ್ಲಿ ಒಂದೇ ಗುಂಪು ಇರಬೇಕು ಪ್ರತಿಸ್ಪರ್ಧಿಸುವ ಎರಡು ಮೂರು ಗುಂಪು ಇದ್ದರೆ ಯಾವುದನ್ನೂ ತಮ್ಮದೆಂದು ಒಪ್ಪಿಕೊಳ್ಳಬಾರದು. ಎಲ್ಲರೂ ಸೇರಿ ಒಂದಾಗಿ ಕೆಲಸಮಾಡುವ ದಾರಿಯನ್ನಾದರೂ ತೋರಿಸಬೇಕು; ಇಲ್ಲವೆ ತಮ್ಮ ಪಾಡಿಗೆ ತಾವು ಕೆಲಸಮಾಡಿಕೊಳ್ಳುವಂತೆ ಹೇಳಬೇಕು. ಗುಂಪಿನಲ್ಲಿ ಒಳಜಗಳವಾದರೆ ಅವರವರೇ ಸರಿಪಡಿಸಿಕೊಳ್ಳಬೇಕು. ಮೇಲಿಂದ ಯಾವ ಬಗೆಯ ಪಂಚಾಯಿತಿಯೂ ಕೂಡದು. ನಿಮ್ಮ ಅಂತಃಕಲಹ ಹೊಂದಿಕೊಳ್ಳುವ ತನಕ ನಿಮಗೂ ನಮಗೂ ಸಂಬಂಧವಿಲ್ಲ ಎನ್ನಬೇಕು.

ಪ್ರತಿ ಗುಂಪೂ ತನ್ನ ನಿಯಮಾವಳಿಯನ್ನು ತಾನೇ ರಚಿಸಿಕೊಳ್ಳಬೇಕು. ಅನುಕೂಲಕ್ಕಾಗಿ ಒಂದೆರಡು ಮಾದರಿಗಳನ್ನು ಸೂಚಿಸಬಹುದು. ಅವನ್ನು ಆ ಗುಂಪು ತನಗೆ ಇಷ್ಟಬಂದಂತೆ ಬದಲಿಸಿಕೊಳ್ಳಬಹುದು. (ಕೆಲವು ಮೂಲ ನಿಯಮಗಳು ಎಲ್ಲರಿಗೂ ಅನ್ವಯಿಸುತ್ತವೆಯಷ್ಟೆ.)

ಗುಂಪಿನ ಕಾರ್ಯಕ್ರಮದಲ್ಲಿ ಈ ಕೆಲವಾದರೂ ಅಂಶಗಳು ಇರಬೇಕು :

೧. ಕಳ್ಳರು ಬರಲಿ, ದಂಗೆ ಪ್ರವಾಹ ಮುತ್ತಿಗೆ ಏನೇ ಬರಲಿ, ಸೇವೆ ಸಲ್ಲಿಸಲು, ಕಾವಲು ಕಾಯಲು ಸಿದ್ಧರಾದ ಸಂಪೂರ್ಣ ಅಹಿಂಸಾಪಂಥಿಗಳಾದ ಸ್ವಯಂ ಸೇವಕರ ದಳದ ನಿರ್ಮಾಣ.

೨. ಆ ಕೇಂದ್ರದ ಅರ್ಥ ವ್ಯವಸ್ಥೆ : ಎಲ್ಲ ಪದಾರ್ಥಗಳ ಉತ್ಪತ್ತಿ, ವಿಭಾಗ, ವಿಕ್ರಯ, ಸಂಗ್ರಹಗಳ ಬಗ್ಗೆ ಕೇಂದ್ರದ ಆಮದು ರಫ್ತಿನ ಕೆಲಸದ ಬಗ್ಗೆ ತಕ್ಕ ವ್ಯವಸ್ಥೆ.

೩. ಕೇಂದ್ರದ ಉದ್ಯೋಗ ವ್ಯವಸ್ಥೆ : ಖಾದೀ ಸಮೇತ.

೪. ನಿರುದ್ಯೋಗಿಗಳಿಗೆ ಕೆಲಸ.

೫. ಮುದುಕರಿಗೆ, ಅಂಗವಿಕಲರಿಗೆ, ಕಡುಬಡವರಿಗೆ ಉದಾರವಾದ ಪರಿಹಾರ ಕಾರ್ಯ.

೬. ಪುಂಡು ಪೋಲಿಗಳನ್ನು ಕುಡುಕರನ್ನು ಒಳ್ಳೆಯ ದಾರಿಗೆ ತರುವುದು.

೭. ಹರಿಜನರ ಇತರರ ಸಾಮಾಜಿಕ ಇತ್ಯಾದಿ ಕಷ್ಟಗಳ ಪರಿಹಾರ.

೮. ಓದುಬರೆಹವಿಲ್ಲದ ಜನರಿಗೆ ಸಾಂಸ್ಕೃತಿಕ ಶಿಕ್ಷಣ.

೯. ಇರುವ ಸ್ತ್ರೀ ಶಿಕ್ಷಣ ಸಂಸ್ಥೆಗಳ ಜೊತೆಗೆ ಸ್ತ್ರೀ ಶಿಕ್ಷಣಕ್ಕಾಗಿ ಬೇರೆ ಏರ್ಪಾಡು.

೧೦. ಮೂಲ ಶಿಕ್ಷಣ.

೧೧. ಗ್ರಾಮನೈರ್ಮಲ್ಯ, ವೈದ್ಯಚಿಕಿತ್ಸೆ.

೧೨. ಜನರ ನೀತಿವರ್ಧನ.

೧೩. ಜಾತಿ ಕುಲಗಳ ನಡುವೆ ಸಾಮರಸ್ಯ.

೧೪. ಪ್ರಾಣಿದಯಾ ಪ್ರಸಾರ.

೧೫. ಹೆಚ್ಚು ವೆಚ್ಚವಿಲ್ಲದ ಜನಪ್ರಿಯವಾದ ನೀತಿಸಮ್ಮತವಾದ ಮನರಂಜನೆ, ಆಟಪಾಟ, ಕಥೆ ಕೀರ್ತನ, ಭಜನೆ, ಸಂಗೀತ, ಹಬ್ಬಹರಿದಿನ, ಜಾತ್ರೆ, ಪ್ರದರ್ಶನ ಇತ್ಯಾದಿ.

೧೬. ರಸ್ತೆ, ಕಾಲುವೆ, ಸೇತುವೆ ಮುಂತಾದ ಸಾರ್ವಜನಿಕ ಉಪಯೋಗದ ಕೆಲಸ. (ಸರಕಾರದ ಕೆಲಸಕ್ಕೆ ನೆರವಾಗಿ, ಅಥವಾ ಪೂರಕವಾಗಿ.)

೧೭. ಇತರ ಕೇಂದ್ರಗಳೊಡನೆ ಸಹಕಾರ.

೧೮. ಮೇಲಿನ ಸಮಿತಿಗಳ ಸಂಬಂಧ.

ಇದಲ್ಲದೆ ಗುಂಪಿನ ಕೆಲಸಕ್ಕಾಗಿ ಧಾನ್ಯರೂಪದಲ್ಲೋ ಹಣದ ರೂಪದಲ್ಲೋ ಧನಸಂಗ್ರಹವೂ ಒಂದು ಮುಖ್ಯ ಕಾರ್ಯ. ಅದರ ಜೊತೆಗೆ ಸರಿಯಾದ ಲೆಕ್ಕಪತ್ರ ಇಡುವುದೂ ಬಂತು.

ಇದರಲ್ಲಿರುವ ಎಲ್ಲ ಅಂಶಗಳನ್ನೂ ಪ್ರತಿಯೊಂದು ಗುಂಪೂ ತೆಗೆದುಕೊಳ್ಳಬೇಕಾಗಿಲ್ಲ. ಯಾವುದಾದರೊಂದು ಕೆಲಸ ಮಾಡಲು ಪ್ರತ್ಯೇಕವಾದ ತಮ್ಮದೇ ಒಂದು ಸಂಸ್ಥೆ ಇದ್ದಲ್ಲಿ ಆ ಗುಂಪಿನ ಕಾರ್ಯಕ್ರಮದ ಪಟ್ಟಿಯಲ್ಲಿ ಆ ಅಂಶವನ್ನು ಬಿಡಬಹುದು.

---

## ೧೬
## ಕೊನೆ ಮಾತು

ನಮ್ಮ ದೇಶದಲ್ಲಿ ಮೊದಲು ಇದ್ದುದು ವರ್ಣವ್ಯವಸ್ಥೆ. ತರುವಾಯ ಪರಕೀಯರು ನಮ್ಮನ್ನು ಆಳತೊಡಗಿದಾಗ,

ಯಾವಾಗಲೋ ಏನೋ ನಮ್ಮ ಹಿರಿಯರು ಜಾತಿ ವ್ಯವಸ್ಥೆ ಯನ್ನು ಏರ್ಪಡಿಸಿದರು. ಒಂದಲ್ಲ ಹಲವು ಬಗೆಯಾಗಿ ಬೆಳೆ ಯಿತು ಆ ವ್ಯವಸ್ಥೆ: ದೇಶ, ಕುಲ, ಕಸಬು, ಮತ, ನುಡಿ ಹೀಗೆ. ಕೆಲವು ಕಾಲ ಆ ವ್ಯವಸ್ಥೆ ಸಾಕಷ್ಟು ವಿಶಾಲವಾಗಿತ್ತು. ಹೊರ ಗಿನಿಂದ ಬಂದ ಪರದೇಶಿಗಳನ್ನು ತಮ್ಮೊಳಗೆ ಸೇರಿಸಿಕೊಂಡು, ಅವರಿಗೆ ಸರಿಯಾದ ಸ್ಥಾನ ಕೊಟ್ಟು, ಎಲ್ಲರೂ ಸೇರಿ ದೊಡ್ಡ ಜನಾಂಗವಾಗುವ ಅವಕಾಶ ಅದರಲ್ಲಿತ್ತು. ಹೀಗೆ ನಿರ್ಮಾಣ ವಾದ ಮಹಾಜನಾಂಗ ತನ್ನ ಹಿಂದಿನ 'ಆರ್ಯ' ನಾಮವನ್ನು ಕಳೆದುಕೊಂಡು 'ಹಿಂದೂ' ಹೆಸರಿನಲ್ಲಿ ಒಂದಾಯಿತು. ಹಲ ಕೆಲವು ಒಳಭೇದಗಳಿದ್ದರೂ ಏಕತೆಯಿತ್ತು. ಎಲ್ಲಾ ಸಚೇತನ ವಸ್ತುಗಳಂತೆ ಕಾಲ ಕಳೆದಹಾಗೆ ಅದಕ್ಕೂ ಶೈಥಿಲ್ಯ ಬಂದು, ಸಮನಿಕೆಯ ಗುಣ ಕಳೆದು, ಆಮೇಲೆ ಬಂದು ನಾಡಿನಲ್ಲಿ ನೆಲೆಸಿದ ಪರದೇಶಿಗಳನ್ನಾಗಲಿ ಒಳನಾಡಿನ ಬಹಿಷ್ಕೃತ ಗುಂಪುಗಳ ನ್ನಾಗಲಿ ಒಳಸಿಕೊಳ್ಳುವ ಶಕ್ತಿ ಉಡುಗಿಹೋಯಿತು. ಅಂತೆಯೆ ಈಗ ಭಾರತೀಯ ಸಮಾಜವನ್ನು ಹಿಂದಿಗಿಂತ ಉತ್ತಮ ರೀತಿ ಯಲ್ಲಿ ವ್ಯವಸ್ಥೆಗೊಳಿಸಬೇಕಾಗಿದೆ.

ವರ್ಣವ್ಯವಸ್ಥೆಯಲ್ಲಿ ಜಾತಿಪದ್ಧತಿಯಲ್ಲಿ ಅಹಿಂಸೆ ಬೀಜ ರೂಪದಲ್ಲಿತ್ತು; ಕೇವಲ ಬೀಜರೂಪವೆ. ಅದರಲ್ಲಿ ಅವಮಾನ ಅಪಹರಣವೇ ಮೊದಲಾದ ಸೂಕ್ಷ್ಮಹಿಂಸೆ ಇಲ್ಲದಿರಲಿಲ್ಲ. ಮಲಿತುನಿಂತ ಶೋಿತ ಗುಂಪುಗಳನ್ನು ನಾಗರಿಕತೆಗೇ ದೂರ ಮಾಡಿ ಬಿಡುತ್ತಿದ್ದರು. ಎಲ್ಲ ಜಾತಿಗಳೂ ಸಮ ಎಂದು ಆ ವ್ಯವಸ್ಥೆ ಒಪ್ಪಲಿಲ್ಲ; ಎಲ್ಲ ಮನುಷ್ಯರೂ ರಾಜಕೀಯ ವ್ಯವಹಾರ ದಲ್ಲಿ ಒಂದೇ, ಸಮಾನ ಎಂದೂ ಒಪ್ಪಲಿಲ್ಲ.

ಇಷ್ಟಾದರೂ ಅದು ಸಮಾಜವನ್ನು ಅಹಿಂಸೆಯ ರೀತಿಯಲ್ಲಿ ಕಟ್ಟುವ ಪ್ರಯತ್ನವೆನ್ನಬೇಕು. ಅದರಿಂದ ನಿರಾಯುಧರಾದ ಜನಕ್ಕೆ ಶಕ್ತಿ ಸಾಮರ್ಥ್ಯ ಪ್ರಭಾವಗಳು ಕೈಗೂಡಿಬಂದವು. ಕೆಲವು ಶತಮಾನಕಾಲ ಈ ವ್ಯವಸ್ಥೆ ಚೆನ್ನಾಗಿ ನಡೆಯಿತು.

ಆ ಕಾಲವಲ್ಲಿದ್ದ ವಾಹನ ಸೌಕರ್ಯದ ಕೊರತೆಯನ್ನು ನೆನೆದರೆ ಈ ವ್ಯವಸ್ಥೆ ಹೇಗೆ ಸರ್ವಭಾರತ ವ್ಯಾಪಿಯಾಯಿತೋ, ಇಷ್ಟೆಲ್ಲ ವೈವಿಧ್ಯವನ್ನು ಹೇಗೆ ಬೆಳೆಸಿತೋ ಎಂದು ಅಚ್ಚರಿಯಾಗುತ್ತದೆ. ಜನರ ಮನಸ್ಸಿನಲ್ಲಿ ಯಾರೋ ಈ ಅಭಿಪ್ರಾಯವನ್ನು ಬಿತ್ತಿರಬೇಕು. ಆಮೇಲೆ ಬುದ್ಧಿಪೂರ್ವಕವಾಗಿಯೂ ಸಹಜವಾಗಿಯೂ ಜನ ಅದನ್ನು ಬೆಳೆಸಿರಬೇಕು. ಮತ್ತೊಮ್ಮೆ ಹೊಸದಾದ ಪರಿಶುದ್ಧವಾದ ರೂಪದಲ್ಲಿ ಅದನ್ನು ಜನರಿಗೆ ತಿಳಿಸಿದರೆ ಜನ ಅದನ್ನು ಅರ್ಥ ಮಾಡಿಕೊಂಡು ಬೆಳಸಿಯಾರು.

ಗೀತೆಯಲ್ಲಿ ಹೇಳಿದೆ: ಪ್ರತಿಯೊಬ್ಬನೂ ತನ್ನ ಸ್ವಭಾವಕ್ಕೆ ಅನುಗುಣವಾದ ಕರ್ಮವನ್ನು ಧರ್ಮವಾಗಿ ಅನುಸರಿಸಬೇಕು ; ಸ್ವಧರ್ಮಾಚರಣೆಯಲ್ಲಿ ಸತ್ತರೂ ಲೇಸು, ಪರಧರ್ಮ ಭಯಾವಹವಾದ್ದು: ಇದು ಪ್ರಕೃತಿಧರ್ಮ.

ಪ್ರತಿಯೊಂದು ಪ್ರಾಣಿಗೂ ಪ್ರಾಣಿವರ್ಗಕ್ಕೂ ಒಂದೊಂದು ವಿಶಿಷ್ಟ ಗುಣ, ಶಕ್ತಿ ಇದೆ. ತನ್ನ ಸುತ್ತಲಿನ ಪರಿಸ್ಥಿತಿಯಲ್ಲಿ ಸ್ವಸಂರಕ್ಷಣೆ ಮಾಡಿಕೊಂಡು ತನಗೆ ವಿರೋಧಿಯಾದ ಪ್ರಾಣಿವರ್ಗವನ್ನು ಇದಿರಿಸಿ ಬಾಳಲು ಅನುಕೂಲವಾದ ಕೆಲವು ತನಿಯಾದ ಅಂಗಗಳನ್ನೋ ಏರ್ಪಾಡುಗಳನ್ನೋ ರಚಿಸಿಕೊಳ್ಳುವ ಶಕ್ತಿ ಇದೆ. ಹಾಗೆ ಮಾಡುವಾಗ ಆ ಪ್ರಾಣಿಯಾಗಲಿ ಆ ವರ್ಗವಾಗಲಿ ವಿರೋಧವರ್ಗವನ್ನು ಅನುಕರಿಸದು ; ಮಿತ್ರವರ್ಗವನ್ನು

ಅನುಕರಿಸೀತು. ವೈರಿವರ್ಗದ ಆಯುಧಗಳನ್ನು ಹಿಡಿಯದು; ಹೊಸ ಆಯುಧಗಳನ್ನೇ ಕಂಡುಹಿಡಿದೀತು; ವೈರಿಯ ಆಯುಧಗಳಿಗೆ ಪ್ರತಿಯಾದವನ್ನೇ ಕಂಡುಹಿಡಿದೀತು. ಮಿಡತೆ ತನ್ನ ಸುತ್ತಲಿನ ಸಸ್ಯರಾಶಿಯ ವರ್ಣರೂಪ ತಳೆದಿದೆ. ಹಾವಿಗೂ ಮುಂಗಸಿಗೂ ಶಾಶ್ವತ ವೈರ. ಎರಡೂ ತನ್ನ ತನ್ನ ಪ್ರತ್ಯೇಕ ರೀತಿಯ ಉಪಾಯ ಕಂಡುಹಿಡಿದಿವೆ; ಎರಡೂ ಉಳಿದಿವೆ. ಮನುಷ್ಯರಲ್ಲಿ ವರ್ಗಭೇದವೇನಿಲ್ಲ. ಆದರೂ ಸಾಂಸ್ಕೃತಿಕ ಲಕ್ಷಣದಿಂದ, ಕೆಲವುಮಟ್ಟಿಗೆ ಪರಿಸ್ಥಿತಿಯ ಬಲದಿಂದ, ಒಂದು ಜನಾಂಗ ಉಳಿದ ಮಾನವಕೋಟಿಯಿಂದ ಬೇರೆಯಾದ ಪರಿಸ್ಥಿತಿಯನ್ನು ಕಲ್ಪಿಸಿಕೊಂಡರೆ ಅದರ ಅದೃಷ್ಟವೇ ಬೇರೆ, ಅದರ ಕಾರ್ಯವೇ ಬೇರೆ ಎನ್ನಬಹುದು. ಅದರ ಫಲವಾಗಿ ಆ ಜನಾಂಗ ತಾನೇ ಬೇರೆಯಾದ ಆತ್ಮರಕ್ಷಣೆಯ ಮಾರ್ಗವನ್ನೂ, ಸಮಾಜ ವ್ಯವಸ್ಥೆಯನ್ನೂ ರಚಿಸಿಕೊಳ್ಳಬೇಕು. ಇಲ್ಲದಿದ್ದರೆ ಇತರ ಜನಾಂಗಗಳನ್ನು ಇದಿರಿಸಲು ಆಗಲಿಕ್ಕಿಲ್ಲ. (ಆಕ್ರಮಣ ನೀತಿಯ) ಈ ದೃಷ್ಟಿಯಲ್ಲಿ ಇಂಥ ಬೇರೆ ಜನಾಂಗಗಳೆಲ್ಲ ಬೇರೆ ಪ್ರಾಣಿವರ್ಗವಿದ್ದಂತೆಯೆ. ಅನುಕರಣದಿಂದ ಬಲ ಬಾರದು. ಅದರಲ್ಲೂ ನಮ್ಮ ಧ್ಯೇಯವೇ ಸರ್ವರಿಗೂ ಸರಿಯಾದ್ದು ಎಂದು ನಾವು ತಿಳಿದಾಗ ಅನುಕರಣ ತಪ್ಪು. ವೈರಿನಿಗ್ರಹ ಸಾಮರ್ಥ್ಯ ನಮ್ಮಲ್ಲಿ ಇದೆ. ಅದು ಪ್ರಕೃತಿ ಗುಣ. ಆ ಸಹಜಗುಣದ ವಿರುದ್ಧವಾದ ಪ್ರಲೋಭನ ಎಷ್ಟೇ ಬರಲಿ, ಆ ಗುಣಕ್ಕೇ ಬಿಡದೆ ಅಂಟಿಕೊಂಡರೆ ಆ ಸಾಮರ್ಥ್ಯ ಬೆಳೆದುಬರುತ್ತದೆ.

ನಮಗೊಂದು ವಿಶಿಷ್ಟ ಕರ್ತವ್ಯವಿದೆಯೆಂದು ನಾವು ನಂಬಿದರೆ ಹಿಂಸೆಯನ್ನು ಸಂಪೂರ್ಣವಾಗಿ ಅಡಗಿಸದೊರದೆಹೋದರೂ ಅಹಿಂಸಾ ಬಲದಿಂದ ಅದನ್ನು ಇದಿರಿಸಿ ನಿಂತು ಗೆಲ್ಲುವ ಭರವಸೆ ಇಟ್ಟುಕೊಳ್ಳಬಹುದು.

---

## ಅಹಿಂಸಾ ಶಾಸ್ತ್ರ

[ಅಹಿಂಸೆಯಿಂದಲೇ ಸಮಾಜದ ಯೋಗಕ್ಷೇಮವನ್ನು ಸಾಧಿಸಲು ಅಹಿಂಸಾಪೂರ್ವಕವಾಗಿಯೆ ಸೇವೆ ಸಲಿಸಲು ಬಯಸುವವರೆಲ್ಲರಿಗೂ ಅಹಿಂಸಾ ಸಿದ್ಧಾಂತದ ಈ ಸಂಕ್ಷಿಪ್ತ ನಿರ್ವಚನ ಉಪಯುಕ್ತವಾದೀತು.]

೧. ಜೀವನದ ನಿಯಮ ಹಿಂಸೆಯಲ್ಲ; ಅಹಿಂಸೆ.

೨. ಹಿಂಸೆ, ನಾನು ನನ್ನದು ಎಂಬ ಮಮಕಾರದ ಫಲ. ಆ ಭಾವನೆಯನ್ನು ವಿಸ್ತರಿಸುತ್ತ ಹೋಗುವುದೇ ಅಹಿಂಸಾ ಸಾಧನೆ.

೩. ಜೀವವೆಲ್ಲ ಸಮಾನ, ಭೇದವಿಲ್ಲ. ವಿಚಾರಮಾಡಿ ನೋಡಿದರೆ ಎಲ್ಲ ಜೀವವೂ ಒಂದೇ. ಅಂದಮೇಲೆ ಮನುಷ್ಯರೆಲ್ಲ ಸಮಾನವೆಂದು ಹೇಳಬೇಕಾಗಿಲ್ಲ.

೪. ಇಡೀ ಮಾನವ ವರ್ಗ ಒಂದು ಕುಟುಂಬ. ಗಂಡು ಹೆಣ್ಣು ಕೂಡಾ ಸಮಾನರು. ಬೇರೆ ಬೇರೆ ಭಾಗ ವಿಭಾಗಗಳಿಂದ ಈ ಕುಟುಂಬ ಜಟಿಲವಾಗಿ ಸಿಕ್ಕು ಸಿಕ್ಕಾಗಿ ಬೆಳೆದಿದೆ. ನಿವಾಸ, ಆಡಳಿತ, ಜಾತಿ, ವರ್ಣ, ಕಸಬು, ಜನ್ಮ, ವಿದ್ಯೆ, ಧನ, ಭಾಷೆ, ಲಿಪಿ ಇನ್ನೂ ಎಷ್ಟೋ ಭೇದಪ್ರಭೇದಗಳಿಂದ ಈ ಭಾಗ ವಿಭಾಗ

ಗಳಾಗಿವೆ. ಈ ಭೇದಗಳಿಂದ ಗುಂಪುಗುಂಪಿನ, ವ್ಯಕ್ತಿವ್ಯಕ್ತಿಯ ನಡುವೆ ವ್ಯತ್ಯಾಸ ಕಾಣಲು ಅವಕಾಶವಾಗಿದೆ.

೫. ಈ ವ್ಯತ್ಯಾಸ, ಭೇದಗಳನ್ನು ನಿರ್ಮೂಲಮಾಡಲು ಸಾಧ್ಯವಿಲ್ಲ; ನಿರ್ಲಕ್ಷಿಸಿ ಲಾಭವಿಲ್ಲ. ಆದರೆ ಈ ಭೇದಜನ್ಯವಾಗಿ ಏನೋ ವಿಶಿಷ್ಟ ಗುಣ ಬರುತ್ತದೆಂದು ಗರ್ವಿಸುವುದು ತಪ್ಪು. ಇಡೀ ಮಾನವ ಕುಟುಂಬದ ಯೋಗಕ್ಷೇಮ ಸುಖ ಶಾಂತಿಗಳಿಗೆ ಸಾಧನವಾಗುವಂತಿದ್ದರೆ, ಅಷ್ಟುಮಟ್ಟಿಗೆ ಅವುಗಳನ್ನು ಗೌರವಿಸಿ ಬೆಳೆಸಬೇಕು. ಪ್ರತಿಯೊಬ್ಬನೂ ತನ್ನ ತನ್ನ ವಿಶಿಷ್ಟ ಗುಣ ಸಾಮರ್ಥ್ಯವನ್ನು ಮಾನವ ಕುಟುಂಬದ ಹಿತಕ್ಕಾಗಿ ಅರ್ಪಿಸುವುದೇ ಅಹಿಂಸಾಸಾಧನೆ. ಕುಟುಂಬದ ಯಾವ ಭಾಗಕ್ಕಾಗಲಿ ಅಹಿತವಾಗಿದ್ದರೆ ತನ್ನ ಆ ಸಾಮರ್ಥ್ಯವನ್ನು ತಾನಾಗಿಯೇ ತ್ಯಾಗಮಾಡುವುದು ಅದರ ಅನುಷ್ಠಾನ. ಹಿಂಸೆಯನ್ನು ಬಿಟ್ಟವನಿಗೆ ಭೇದಗಳನ್ನೆ ನಾಶಮಾಡುವ, ಎಲ್ಲ ಮನುಷ್ಯರನ್ನೂ ಒಂದೋ ಹತ್ತೋ ವಿಧಗಳಿಗೆ ಸರಿಯಾಗಿ ತಿದ್ದುವ ಮಾತು ವ್ಯರ್ಥ. ಅದು ಅಸಾಧ್ಯ.

೬. ಭೇದ, ವೈಶಿಷ್ಟ್ಯಗಳಿಂದ ನಮಗೆ ದೊರೆಯುವುದು ಅಧಿಕಾರವಲ್ಲ; ಕರ್ತವ್ಯ. ಅಂತೆಯೆ ಅಹಿಂಸಾ ಸಾಧನೆಯಲ್ಲಿ ಸರ್ವಧರ್ಮ ಸಮಾನತೆ, ಅಸ್ಪೃಶ್ಯತಾ ನಿವಾರಣೆ, ಸಾಮಾಜಿಕ ಸ್ವಾತಂತ್ರ್ಯಗಳು ಅನಿವಾರ್ಯ ನಿಯಮಗಳು.

೭. ಮಾನವ ಕುಟುಂಬದ ಪ್ರತಿಯೊಬ್ಬ ವ್ಯಕ್ತಿಯೂ ಸುಖವಾಗಿ ಸಮಾಧಾನವಾಗಿ ಇರಬೇಕಾದರೆ ಮಾನವ ವ್ಯವಹಾರದಲ್ಲಿ ಹಿಂಸೆ ಸಂಪೂರ್ಣವಾಗಿ ಲಯವಾಗಬೇಕು.

೮ ಒಂದುಪಕ್ಷ ಹಿಂಸೆಗೆ ಪ್ರಾರಂಭಮಾಡಿದರೆ ಇನ್ನೊಂದು ಪಕ್ಷದವರೂ ಪ್ರತೀಕಾರಕ್ಕೋ, ಆತ್ಮರಕ್ಷಣೆಗೋ ಅಂತು ಹಿಂಸೆಗೆ ಕೈಹಾಕುತ್ತಾರೆ. ಹೀಗಾಗೇ ಹಿಂಸೆ-ಪ್ರತಿಹಿಂಸೆಗಳನ್ನು ಮನುಷ್ಯರು ಕಲಿತದ್ದು.

೯. ಇದರಿಂದ ಹಿಂಸೆ ಸಾಯದು. ವಿರೋಧಿ ಪಕ್ಷಗಳಲ್ಲಿ ನ್ಯಾಯವಾದ ಬಾಂಧವ್ಯ ಹುಟ್ಟದು. ಅಲ್ಲದೆ ಕೊಟ್ಟ ಕೊನೆಯಲ್ಲಿ ಯಾರಿಗೂ ಲಾಭವಿಲ್ಲದೆ ತಮಗೂ ತಮ್ಮ ಮಕ್ಕಳು ಮರಿಗೂ ಇಡೀ ಮಾನವವರ್ಗಕ್ಕೂ ಕಷ್ಟನಷ್ಟವಾಗುವುದೊಂದೇ ಅದರ ಫಲ.

೧೦. ಆದ್ದರಿಂದ ಅನ್ಯಾಯ ದೌಷ್ಟ್ಯ ಎಷ್ಟೇ ಬಲವತ್ತರವಾದದ್ದಾಗಿರಲಿ, ಅದಕ್ಕೆ ಪ್ರತಿಯಾಗಿ ಹಿಂಸೆಯನ್ನು ಹೂಡುವುದು ಸರಿಯಲ್ಲ. ಹಿಂಸೆಯ ಚಪಲವನ್ನು ನಿಗ್ರಹಿಸಿದರೇನೇ ಅಹಿಂಸಾ ಸಾಧನೆ ಸಾಧ್ಯ; ಇಲ್ಲದಿದ್ದರೆ ಇಲ್ಲ.

೧೧. ಬಾಳು ಬದುಕನ್ನು ಕಾಪಾಡಿ ಸ್ಥಿರಗೊಳಿಸಿ ಸರಿಯಾದ ರೀತಿಯಲ್ಲಿ ಬೆಳೆಸುವ ಶಕ್ತಿ ಅಹಿಂಸೆಗೆ ಇರಬೇಕು. ಅಂದರೆ, ಹಿಂಸೆಯಿಂದ ಸರಿಮಾಡ ಬಯಸುವ ಅನ್ಯಾಯ ಅಹಿತಗಳನ್ನು ಇದಿರಿಸಲು ಯೋಗ್ಯವಾದ ಅಹಿಂಸಾ ಚಿಕಿತ್ಸೆ ಇರಬೇಕು. ಶ್ರದ್ಧಾವಂತನಾದ ಅಹಿಂಸಾ ಸಾಧಕನಿಗೆ ಆ ಉಪಾಯ ತಿಳಿದುಬರುತ್ತದೆ.

೧೨. ಹಿಂಸೆ ಇಲ್ಲದೆಯೆ ಲೋಕವ್ಯವಹಾರವೆಲ್ಲವನ್ನೂ ನಡೆಸಬಹುದು. ಕೆಲವು ಕ್ಷೇತ್ರಗಳಲ್ಲಿ ಅಹಿಂಸೆ ನಿರುಪಯೋಗಿ; ಕೆಲವು ಅಧರ್ಮಗಳಿಗೆ ಅಹಿಂಸೆ ಮದ್ದಾಗಲಾರದು ಎಂಬ ಭ್ರಾಂತಿಯನ್ನು ಜನ ಬಿಡಬೇಕು. ಸಮಾಜದಿಂದಲೂ ಆ

ಭ್ರಾಂತಿ ದೂರವಾಗಬೇಕು. ಈ ಭ್ರಾಂತಿ ಇರುವ ತನಕ ಅಹಿಂಸಾ ಸಾಧಕನ ಸಾಧನೆ ಅಪೂರ್ಣವೆಂದು ತಿಳಿಯಬೇಕು.

೧೩. ಇದನ್ನು ಸಾಧಿಸಲು ನಾಗರಿಕತೆ ಸುಖ ಸಮಾಧಾನಗಳ ಬಗ್ಗೆ ನಮಗಿರುವ ಅಭಿಪ್ರಾಯಗಳನ್ನು ಬದಲಿಸಬೇಕು. ಇದುವರೆಗಿನ ಅಹಿಂಸಾ ಸಾಧನೆಯ ಅನುಭವದಿಂದ ಮುಂದೆ ಹೇಳುವ ಕೆಲವು ತತ್ವ ಅಹಿಂಸೆಗೆ ಅನಿವಾರ್ಯ ನಿಯಮಗಳೆಂದು ತಿಳಿದಿದೆ.

೧೪. ವಿಲಾಸ ಜೀವನಕ್ಕೂ ಹಿಂಸೆಗೂ ನೇರಾದ ಕಾರ್ಯಕಾರಣ ಸಂಬಂಧ. ಆದರೆ ಅಹಿಂಸೆಗೆ ನಿಗ್ರಹ–ಕಾಯಕ–ಸೇವೆಗಳ ಸರಳಜೀವನ ಅನುಕೂಲ.

೧೫. ವಿಶೇಷ ವೈಭವ ಸಂಪತ್ತು ವಿಲಾಸಗಳ ಜೀವನ, ಕೃತಿ ಹಿಂಸೆಯಿಲ್ಲದೆ ಸಾಧ್ಯವಿಲ್ಲ. ಇವನ್ನು ನಾಗರಿಕತೆಯ ಚಿಹ್ನೆಯೆನ್ನುವುದು ತಪ್ಪು.

೧೬. ಮಾನವ ಕುಟುಂಬದ ಪ್ರತಿಯೊಬ್ಬ ವ್ಯಕ್ತಿಯೂ ನಿರ್ಭಯವಾಗಿ ಗೌರವದಿಂದ ಸಮರಸವಾಗಿ ಆರೋಗ್ಯಜೀವನ ನಡಸುವಂತಿರಬೇಕು: ಅದು ನಿಜವಾದ ನಾಗರಿಕತೆ, ಸಂಸ್ಕೃತಿಯ ಲಕ್ಷಣ. ಸಂಯಮ ಪೂರ್ಣವಾದ ದೇಹ ಕಷ್ಟದ ಸರಲ ಜೀವನವಾದರೂ ಚಿಂತೆಯಿಲ್ಲ. ಅದೇ **ಸರ್ವೋದಯದ** ನಾಗರಿಕತೆ. ಎಲ್ಲರ ಹಿತದ ಈ ನಾಗರಿಕತೆಗೆ ಅಹಿಂಸೆಯೊಂದೇ ದಾರಿ.

೧೭. ಅಹಿಂಸಾ ಸಂಸ್ಕೃತಿಯೆಂದರೆ ಅರಾಜಕತೆ, ಅವ್ಯವಸ್ಥೆ, ಪರಸ್ಪರ ಸಂಬಂಧವೇ ಇಲ್ಲದೆ ಬಿಡಿಬಿಡಿಯಾಗಿ ಬಾಳುವ ಚಿಕ್ಕಚಿಕ್ಕ ಗುಂಪುಗಳು ಅಲ್ಲ. ಅಹಿಂಸೆಯ ಗುರಿ

ಇಡೀ ವಿಶ್ವದೊಡನೆ, ಜಂತುವರ್ಗದೊಡನೆ ಕೂಡ, ತಾದಾತ್ಮ್ಯ ಭಾವ. ಈ ಭಾವ ಪರಪೀಡೆಯಿಂದ, ಆತ್ಮ ವಿಜೃಂಭಣೆಯಿಂದ ಸಿದ್ಧಿಯಾಗದು; ಅಲ್ಪಾತಿ ಅಲ್ಪ ತಿರ್ಯಗ್ಜಂತುಗಳಿಗೂ ಬದುಕಿ ಬಾಳಲು ಅವಕಾಶಕೊಡುವ ಕೃತಿಯಿಂದ ಸಿದ್ಧಿಸೀತು. ಇದು ಲಕ್ಷ್ಯ: ಇದಕ್ಕನುಸಾರವಾಗಿ ಕೇಂದ್ರೀಕರಣ ಪೃಥಕ್ಕರಣ, ಮನುಷ್ಯ ಪರಿಶ್ರಮ ಯಾಂತ್ರಿಕ ಪರಿಶ್ರಮ — ಈ ಎರಡೂ ಸೆಳವುಗಳ ಮಧ್ಯದ ದಾರಿಯನ್ನು ತುಳಿಯಬೇಕು.

೧೮. ಅಹಿಂಸಾ ಸಾಧನೆಗೆ ಯಾರ ಸಹಕಾರವೂ ಅತ್ಯಗತ್ಯವಲ್ಲ. ಪ್ರತಿಯೊಬ್ಬನೂ ತನ್ನೊಳಗಿನ ಬೆಳಕನ್ನು ಅರಿತು ಇತರರಿಗೆ ಮಾರ್ಗದರ್ಶಿಯಾಗಬೇಕು. ಹೀಗೆಂದರೆ ಇತರರ ಸಹಕಾರವನ್ನು ಅಹಿಂಸಾ ಸಾಧಕ ನಿರ್ಲಕ್ಷಿಸಬೇಕೆಂದಲ್ಲ.

೧೯. ಅಹಿಂಸೆ ಪರಮಧರ್ಮ ಮಾತ್ರವಲ್ಲ; ಸತ್ಯಾಗ್ರಹಿಗೆ ಅದು ಸ್ವಧರ್ಮ. ಸುಖದುಃಖ, ಲಾಭಾಲಾಭ, ಜಯಾಜಯ ಏನೇ ಬರಲಿ ಸತ್ಯಾಗ್ರಹಿ ತನ್ನೀ ಧರ್ಮವನ್ನು ಆಚರಿಸಲೇಬೇಕು. ನಿರಂತರ ದೈವಾನ್ವೇಷಣೆ ಸತ್ಯಶೋಧನೆ ಇಲ್ಲದೆ, ಅದಕ್ಕೆ ತಳಹದಿಯಾಗಿ ತ್ರಿಕರಣಶುದ್ಧಿ, ನಿರ್ಭಯ ಜೀವನ ಇಲ್ಲದೆ ಈ ಸ್ವಧರ್ಮಾಚರಣೆ ಸಾಧ್ಯವಲ್ಲ

೨೦. ಈ ಶ್ರದ್ಧೆ, ಶೋಧನೆ ಇಲ್ಲದೆ ಅಹಿಂಸಾ ಶ್ರದ್ಧೆ ಕಡೆತನಕ ಉಳಿಯದು.

---

# ಸಾಧನೆಯ ನಿಯಮ

೧. ಅಹಿಂಸೆಯ ಗುರಿ ಕಟ್ಟುಗಳನ್ನು ನಡಸಲು ಬಾಳು ಬದುಕಿನಲ್ಲಿ ಎಂಥ ಪರಿವರ್ತನೆ, ತ್ಯಾಗ ಮಾಡಬೇಕಾಗಿ ಬಂದರೂ ಅಹಿಂಸಾಪಂಥಿ ಸಿದ್ಧವಾಗಿರಬೇಕು.

೨. ಅಹಿಂಸೆಯ ಸಾಧನೆಗೆ ಸ್ವಂತ ಜೀವನವೇ ಪ್ರಥಮ ಕ್ಷೇತ್ರ. ಅಂತೇ ಅಹಿಂಸಾಪಂಥಿ ಮೊಟ್ಟಮೊದಲು ತನ್ನ ಕುಟುಂಬದವರೊಡನೆ, ಜೊತೆಗಾರರೊಡನೆ, ನೆರೆಹೊರೆಯವ ರೊಡನೆ, ಊರಿನೊಡನೆ ಶುದ್ಧ ಅಹಿಂಸೆಯಿಂದ ಪ್ರೀತಿಯಿಂದ ನಡೆದುಕೊಳ್ಳಬೇಕು. ಅವರಿಗೂ ತನಗೂ ಮನಸ್ತಾಪ ಬಂದರೆ ಅವರೇನಾದರೂ ಅನ್ಯಾಯವಾಗಿ ಅನುಚಿತವಾಗಿ ನಡೆದರೆ ಅದನ್ನು ಅಹಿಂಸೆಯ ಉಪಾಯದಿಂದಲೇ ಪರಿಹರಿಸಬೇಕು. ಅಹಿಂಸಾಪಂಥಿಗೆ ದಿವಾನೀ ಫೌಜೀ ಕಚೇರಿಗಳೆರಡೂ ವರ್ಜ್ಯ. ಪೋಲೀಸೂ ಅಷ್ಟೇ. ತನ್ನ ಪ್ರಾಣ ಮಾನ ಸಂಪದಗಳ ರಕ್ಷಣೆ ಗಾಗಲಿ ತನಗಾದ ಅನ್ಯಾಯ ನಿವಾರಣೆಗಾಗಲಿ ಈ ಮೂರನ್ನೂ ಆಶ್ರಯಿಸಕೂಡದು.

೩. ತನ್ನದಾಗಲಿ ತನ್ನ ಬಣದ್ದಾಗಲಿ ಪ್ರಾಣ ಮಾನ ಸಂಪದಗಳ ರಕ್ಷಣೆಗೆ ಅಥವಾ ದೊಂಬಿ ಜಗಳ ದಂಗೆಗಳನ್ನು ಅಡಗಿಸಲಿಕ್ಕೆ ಅಹಿಂಸಾಪಂಥಿ ಹಿಂಸಾ ಪ್ರಯೋಗಮಾಡುವ ವಿಚಾರವನ್ನೇ ಮಾಡಬಾರದು; ಅದರ ಬದಲು ತನಗೆ ನಷ್ಟ ವಾದರೂ ಪ್ರಾಣಾಪಾಯ ಬಂದರೂ ಅಹಿಂಸಾ ಮಾರ್ಗವನ್ನು ಕಂಡುಹಿಡಿಯಬೇಕು.

೭. ವ್ಯಕ್ತಿಜೀವನದಲ್ಲಾಗಲಿ ಸಮಾಜದಲ್ಲಾಗಲಿ ನಡೆದ ಅಥವಾ ನಡೆಯಬಹುದಾದ ಹಿಂಸೆ ಪ್ರತಿಯೊಂದಕ್ಕೂ ಮೂಲ ಕಾರಣವೇನೋ ಆತ ಆರಯ್ದು ನೋಡಬೇಕು. ಹಿಂಸೆಯನ್ನುಪಯೋಗಿಸಬೇಕೆನ್ನುವ ಗುಂಪಿಗೆ ನಿಜವಾಗಿ ಅನ್ಯಾಯವಾಗಿದ್ದರೆ, ಅವರ ಬೇಡಿಕೆ ನ್ಯಾಯವಾಗಿದ್ದರೆ ಅದನ್ನು ತಾನು ಒಪ್ಪಿಕೊಳ್ಳಬೇಕು; ಸಮಾಜವನ್ನು ಅದಕ್ಕೊಪ್ಪಿಸಿ ಅನ್ಯಾಯ ಪರಿಹಾರ ಮಾಡಬೇಕು ಸಮಾಜವನ್ನು ತಾನು ಒಪ್ಪಿಸಲಾರದಾದರೆ ಅನ್ಯಾಯಕ್ಕೆ ಗುರಿಯಾದ ಪಕ್ಷಕ್ಕೆ ಅಹಿಂಸೆಯ। ಉಪಾಯವನ್ನವಲಂಬಿಸುವಂತೆ ಬುದ್ಧಿ ಹೇಳಬೇಕು. ಅಲ್ಲೂ ತನ್ನ ಮಾತು ವ್ಯರ್ಥವಾದರೆ ಉಭಯಪಕ್ಷಕ್ಕೂ ವಿರುದ್ಧವಾಗಿ ಸೂಕ್ತವಾದ ರೀತಿ ಸತ್ಯಾಗ್ರಹ ಮಾಡಬೇಕು.

೫ ಜನಕ್ಕೆ ವಿಪತ್ತು ಬಂದಾಗ, ಪ್ರಾಣದ ಹಂಗು ತೊರೆದು ಅವರ ನೆರವಿಗೆ ಧುಮುಕಬೇಕು.

೬. ಮೇಲಿನ ಸೂತ್ರಗಳನ್ನು ಅರಿತುಕೊಂಡುದರ ಗುರುತು ತನ್ನ ನಡತೆಯಲ್ಲಿ ಈ ಗುಣಾವಳಿಯಿಂದ ಒಡೆದು ಕಾಣಬೇಕು:—

ಅ) ಅಸ್ಪೃಶ್ಯಭಾವನಾ ರಾಹಿತ್ಯ; ಸ್ವಶ್ರೇಷ್ಠತಾಮದದ ಅಭಾವ; ಸರ್ವ ಸಹಭೋಜನ.

ಆ) ಕುಲ ಜಾತಿ ಪ್ರಾಂತ ಮತ ಭಾಷಾದಿ ಮದ.

ಇ) ಸರ್ವಧರ್ಮ ಸಮ ಗೌರವ ಬುದ್ಧಿ.

ಈ) ಕಾಮಿನೀ ಕಾಂಚನ ಶುಚಿ.

ಉ) ನಿತ್ಯ ಸೂತ್ರಕರಣ, ಖಾದೀಧಾರಣ ವ್ರತ, ಗ್ರಾಮೋದ್ಯೋಗ ಪ್ರೀತಿ.

ಊ) ತನಗೆ ಕೊಂಚ ಕಷ್ಟವಾದರೂ ಜನಸೇವೆಯಲ್ಲಿ ಅವ್ಯಾಹತ ಅಚಲ ಶ್ರದ್ಧೆ.

ಎ) ಸಾರ್ವಜನಿಕ ಸಂಸ್ಥೆಗಳ ಅಧಿಕಾರ ವಾಂಛೆ ಇಲ್ಲದಿರುವಿಕೆ ; ಅದಕ್ಕಾಗಿ ಪ್ರಚಾರ, ಭಿಕ್ಷೆ ಮಾಡದಿರುವಿಕೆ ; ಕರ್ತವ್ಯ ಪರಿಪಾಲನೆಗಾಗಿ ಉನ್ನತೋನ್ನತ ಅಧಿಕಾರ ತ್ಯಾಗಕ್ಕೂ ಸಿದ್ಧರಾಗಿರುವುದು.



ಮೈಸೂರು ಗ್ರಾಮಸೇವಾ ಮುದ್ರಾಲಯದಲ್ಲಿ ಸಿ. ವಿ. ರಾಜಗೋಪಾಲ್ ಬಿ
ರವರಿಂದ ಮುದ್ರಿಸಲ್ಪಟ್ಟಿತು